ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಎಂ.ಫಿಲ್. ಪದವಿ ಸಂಪ್ರಬಂಧ

ನಿಬಂಧದ ವಿಷಯ

# "ಕನ್ನಡ ಗ್ರಂಥಸಂಪಾದನ ಶಾಸ್ತ್ರಕ್ಕೆ ತೀ.ನಂ.ಶ್ರೀಕಂಠಯ್ಯನವರ ಕೊಡುಗೆ"


ಸಂಶೋಧನ ವಿದ್ಯಾರ್ಥಿ

**ಸುಧೀರ್, ಕೆ.**

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ – ಬೆಂಗಳೂರು

ಮಾರ್ಗದರ್ಶಕರು

**ಪ್ರೊ. ಹಂಪ. ನಾಗರಾಜಯ್ಯ**

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ – ಬೆಂಗಳೂರು



2007




ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಎಂ.ಫಿಲ್. ಪದವಿ ಸಂಪ್ರಬಂಧ

ನಿಬಂಧದ ವಿಷಯ

# "ಕನ್ನಡ ಗ್ರಂಥಸಂಪಾದನ ಶಾಸ್ತ್ರಕ್ಕೆ ತೀ.ನಂ.ಶ್ರೀ.ಕಂಠಯ್ಯನವರ ಕೊಡುಗೆ"

ಸಂಶೋಧನ ವಿದ್ಯಾರ್ಥಿ

**ಸುಧೀರ್, ಕೆ.**
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ – ಬೆಂಗಳೂರು

ಮಾರ್ಗದರ್ಶಕರು

**ಪ್ರೊ| ನಾ. ಗೀತಾಚಾರ್ಯ**
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ – ಬೆಂಗಳೂರು



**2007**

# ಮಾರ್ಗದರ್ಶಕರ ಪ್ರಮಾಣಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೬-೦೭ನೇ ಸಾಲಿನ ಎಂ.ಫಿಲ್. ಪದವಿಗಾಗಿ "ಕನ್ನಡ ಗ್ರಂಥಸಂಪಾದನ ಶಾಸ್ತ್ರಕ್ಕೆ ತೀ.ನಂ.ಶ್ರೀ.ಯವರ ಕೊಡುಗೆ" ಎಂಬ ಸಂಪ್ರಬಂಧವನ್ನು ಶ್ರೀ ಸುಧೀರ್, ಕೆ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 30-9-2008

*ಮಾರ್ಗದರ್ಶಕರ ಸಹಿ*

ಸ್ಥಳ : ಬೆಂಗಳೂರು.

(ಪ್ರೊ| ನಾ. ಗೀತಾಚಾರ್ಯ)

# ಅಭ್ಯರ್ಥಿಯ ಪ್ರಮಾಣಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೬-೦೭ನೇ ಸಾಲಿನ ಎಂ.ಫಿಲ್. ಪದವಿಗಾಗಿ "ಕನ್ನಡ ಗ್ರಂಥಸಂಪಾದನ ಶಾಸ್ತ್ರಕ್ಕೆ ತೀ.ನಂ.ಶ್ರೀ.ಯವರ ಕೊಡುಗೆ" ಎಂಬ ಸಂಪ್ರಬಂಧವನ್ನು ಪ್ರೊ ನಾ.ಗೀತಾಚಾರ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರೆವಣಿಗೆಯಾಗಿದ್ದು, ಇದರ ಯಾವುದೇ ಭಾಗವನ್ನು ಈವರೆಗೆ ಬೇರಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಲಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 30-9-2008

ಅಭ್ಯರ್ಥಿಯ ಸಹಿ

K. Sudheer.

ಸ್ಥಳ : ಬೆಂಗಳೂರು.

(ಸುಧೀರ್, ಕೆ.)

# ಪರಿವಿಡಿ

– – –

## ಅಧ್ಯಾಯ – ೧

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

### ೧. ಪೀಠಿಕೆ

ಗ್ರಂಥಸಂಪಾದನೆಯು ಸ್ವಾಭಾವಿಕವಾಗಿಯೇ ಗ್ರಂಥಗಳಿಗೆ ಸಂಬಂಧಪಟ್ಟಿದೆ. ಅಂದರೆ ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿ, ಹಲವು ಹಸ್ತಪ್ರತಿಗಳ ಸಹಾಯದಿಂದ ಶುದ್ಧಪಾಠಗಳನ್ನು ನಿರ್ಣಯಿಸುವುದೇ 'ಗ್ರಂಥಸಂಪಾದನೆ' ಎಂಬ ಪದದ ಅರ್ಥವಾಗಿದೆ. ಕ್ರಿಸ್ತಶಕೆಯ ಆದಿಯಿಂದಲೂ ಈ ಶಾಸ್ತ್ರ ನಾನಾದೇಶಗಳಲ್ಲಿ ಈ ಸಂಪಾದನ ಕಾರ್ಯ ಕ್ರಮಬದ್ಧವಾಗಿ ನಡೆದುಬಂದಿದೆ. ಗ್ರಂಥಸಂಪಾದನೆ ಒಂದು ಉಪಯುಕ್ತ ಶಾಸ್ತ್ರವಾಗಿ ಪರಿಣಮಿಸಿದೆ. ಎರಡು ಸಾವಿರ ವರ್ಷ ಪ್ರಾಚೀನತೆಯುಳ್ಳ ಕನ್ನಡದಲ್ಲಿ ವಿಪುಲವಾದ ಗ್ರಂಥರಾಶಿಯಿದೆ.

ಗ್ರಂಥಸಂಪಾದನೆ, ಒಂದು ಶಾಸ್ತ್ರವಾಗಿ ಭಾರತಕ್ಕೆ ನಡೆದು ಬಂದುದು ಪಶ್ಚಿಮ ರಾಷ್ಟ್ರಗಳಿಂದ, ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಮೊದಲು ಗ್ರಂಥಗಳ ಹಸ್ತಪ್ರತಿಗಳ ಸಂಗ್ರಹಣಾಕಾರ್ಯವೂ ಅವುಗಳನ್ನು ಪರಿಸ್ಕರಿಸುವ ಕಾರ್ಯವು ನಡೆದುವು. "ಫ್ರಾನ್ಸ್, ಹಾಲೆಂಡ್, ಇಂಗ್ಲೆಂಡ್, ಜರ್ಮನಿ ಮುಂತಾದ ಐರೋಪ್ಯದೇಶಗಳಲ್ಲೂ, ಅಮೇರಿಕಾ ದೇಶದಲ್ಲೂ ಪ್ರಾಚೀನ ಗ್ರೀಕ್, ಲ್ಯಾಟಿನ್, ಹಿಬ್ರೂಸಾಹಿತ್ಯಗಳ ವ್ಯಾಸಂಗ, ಗ್ರಂಥಸಂಪಾದನೆಗಳು ಸತತವಾಗಿ ನಡೆಯುತ್ತಿದೆ" [೧] ಎಂದು ಎಂ.ಎಂ. ಕಲಬುರ್ಗಿಯವರ ಅಭಿಪ್ರಾಯವಾಗಿದೆ. ಅಂದರೆ ಈ ಶಾಸ್ತ್ರ ಹೆಚ್ಚಿನದಾಗಿ ಪಾಶ್ಚಾತ್ಯ ದೇಶಗಳಲ್ಲಿ ಬೆಳೆದು ನಮ್ಮ ದೇಶದಲ್ಲಿ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ ಎಂದು ಹೇಳಬಹುದಾಗಿದೆ.

ಪಾಶ್ಚಾತ್ಯ ವಿದ್ವಾಂಸರುಗಳಾದ ಕಿಟ್ಟಲ್, ಬಿ.ಎಲ್. ರೈಸ್, ಇತ್ಯಾದಿ ಸಂಶೋಧಕರ ಪ್ರಭಾವ ನಮ್ಮ ಸ್ವದೇಶಿ ವಿದ್ವಾಂಸರ ಮೇಲೂ ಆಗಿದೆ ಎಂಬುದಕ್ಕೆ ಕಾರಣ ನಮ್ಮ ಕನ್ನಡ ಸಾಹಿತ್ಯದಲ್ಲಿ ಬೆಳೆದು ನಿಂತಿರುವ ವಿಪುಲ ಗ್ರಂಥರಾಶಿಗಳು. ಮೂಲತಃ ಗ್ರಂಥಸಂಪಾದನೆ ಎಂದರೇನು, ಅದರ ಕೆಲವು ಪ್ರಾಥಮಿಕ ವಿಚಾರಗಳು ಈ ಕೆಳಕಂಡಂತೆ ಇವೆ.

'ಗ್ರಂಥಸಂಪಾದನೆ' ಭಾರತೀಯ ಸಾಹಿತ್ಯ ಪರಿಸರಕ್ಕೆ ಹೊಸದಾದ ಪರಿಕಲ್ಪನೆ. ಪಾಶ್ಚಾತ್ಯರಿಂದ ಬಂದುದು. 'ಗ್ರಂಥಸಂಪಾದನೆ' ಎನ್ನುವ ಪದಕ್ಕೆ "ಟೆಕ್ಸ್ಚ್ಯುಯಲ್ ಕ್ರಿಟಿಸೀಸಂ" ಎನ್ನುವುದನ್ನು ಸಂವಾದಿಯಾಗಿ ಬಳಸಲಾಗುತ್ತಿದೆ.

ಸಾಮಾನ್ಯವಾಗಿ 'ಗ್ರಂಥ' ಎಂದರೆ 'ಪುಸ್ತಕ' ಎಂದರ್ಥ ಅಥವಾ ಕೃತಿ ಎಂದರ್ಥ. ವಿಶೇಷ ಅರ್ಥದಲ್ಲಿ ಇದನ್ನು 'ಕಟ್ಟು' ಎಂದು ಕರೆಯುತ್ತಾರೆ. ಕಟ್ಟು ಎಂದರೆ ಗಳಿಸುವುದು ಎಂದಾಗುತ್ತದೆ. ಗ್ರಂಥ ಎಂಬುದು ಬರೆ, ಬರೆಯಿಸು ಎನ್ನುವ ಅರ್ಥವೂ ಸಹ ಇದೆ. ೧೯ನೇ ಶತಮಾನಕ್ಕೆ ಭಾರತಕ್ಕೆ ಈ ಗ್ರಂಥಸಂಪಾದನೆ ಎಂಬ ಪರಿಕಲ್ಪನೆ ಪರಿಚಯವಾಯಿತು. ಅಂದರೆ ಮೂಲಕೃತಿಯನ್ನು ಹುಡುಕಿ ಅದನ್ನು ಪುನರ್ ನಿರ್ಮಾಣ ಮಾಡುವ ಕಾರ್ಯ ಮುಂದುವರಿಯಿತು.

ಪಾಶ್ಚಾತ್ಯ ವಿದ್ವಾಂಸನಾದ ಜೆ.ಪಿ. ಪೋಸ್ಟ್‌ಗೇಟ್ ಎನ್ನುವ ವಿದ್ವಾಂಸನ ಪ್ರಕಾರ 'ಗ್ರಂಥ' ಎಂಬ ಪದಕ್ಕೆ ಈ ರೀತಿ ವ್ಯಾಖ್ಯಾನ ನೀಡಿದ್ದಾನೆ. ಈತನ ಪ್ರಕಾರ ಗ್ರಂಥವೆಂದರೆ: "ಸಂಶೋಧಕನಿಗೆ ಪರಿಚಿತವಾಗಿರುವ ಅಥವಾ ಪರಿಚಯ ಮಾಡಿಕೊಳ್ಳಲು ಸಾಧ್ಯವಾಗಿರುವ ಮತ್ತು ಅವನಿಗೆ ಹೆಚ್ಚು ಕಡಿಮೆ ತಿಳಿದಿರುವ ಭಾಷೆಯಲ್ಲಿ ಅರ್ಥವತ್ತಾಗಿರುವ ರೀತಿಯಲ್ಲಿ ಬರೆದಿರುವ ಯಾವ ಲೇಖನವನ್ನಾದರೂ 'ಗ್ರಂಥ' ಎಂದು ಕರೆಯಬಹುದು"[೨] ಎಂದು ಹೇಳುತ್ತಾರೆ. ಅಂದರೆ 'ಗ್ರಂಥ' ಎಂದರೆ ಸಾಮಾನ್ಯ ಅರ್ಥದಲ್ಲಿ 'ಲೇಖನ' ಎಂಬ ಅರ್ಥವೂ ಬರುತ್ತದೆ.

ಅದೇ ರೀತಿ 'ಸಂಪಾದನೆ' ಎಂಬ ಪದಕ್ಕೆ ಪಾಶ್ಚಾತ್ಯ ವಿದ್ವಾಂಸನಾದ ಸರ್ ಮೋನಿಯರ್ ವಿಲಿಯಮ್ಸ್‌ರವರ ಪ್ರಕಾರ 'ಗಳಿಸು, ದೊರಕಿಸು, ಕೊಡು, ದಾನ ಮಾಡು, ಅನುಗ್ರಹಿಸು, ನಿರ್ವಹಿಸು, ಪೂರಯಿಸು, ಅಲಂಕಾರಗೊಳಿಸು, ಸಂಸ್ಕಾರಗೊಳಿಸು, ಜಾರಿಗೊಳಿಸು, ಸಿದ್ಧಗೊಳಿಸು, ಹೊರತರು, ಸಕ್ರಿಯಗೊಳಿಸು, ಒಂದು ವ್ಯವಸ್ಥೆಗೆ ಒಳಪಡಿಸು ಎಂದೆಲ್ಲಾ ಅರ್ಥಗಳಿವೆ ಎಂದು ಸೂಚಿಸಿದ್ದಾನೆ. ಅಂದರೆ ಇನ್ನೊಂದು ಮಾತಿನಲ್ಲಿ ಹೇಳುವುದಾದರೆ 'ಸಂಪಾದನೆ' ಎಂದರೆ ಪ್ರಾಚೀನ ಕವಿಗಳ ಕೃತಿಗಳನ್ನು ದೊರಕಿಸುವುದು, ಅದರ ಬಗ್ಗೆ ಅಧ್ಯಯನ ಮಾಡುವುದು ಎಂಬ ಅರ್ಥವನ್ನು ಕೊಡುತ್ತದೆ. ಸಾಹಿತ್ಯದ ದೃಷ್ಟಿಯಿಂದ 'ಸಂಪಾದನೆ' ಎನ್ನುವ ಮಾತು ಪ್ರಾಪ್ತವಾದುದು ವೀರಶೈವ ಪುನರುಜ್ಜೀವನ ಕಾಲದಲ್ಲಿ ಅಂದರೆ ೧೫ನೇ ಶತಮಾನದಲ್ಲಿ ಎಂದು ಹೇಳಬಹುದಾಗಿದೆ.

ಪಶ್ಚಿಮ ರಾಷ್ಟ್ರಗಳಲ್ಲಿ ಈ ಶಾಸ್ತ್ರ ಮೊದಲು ಹುಟ್ಟಿತು. ತದನಂತರ ಭಾರತಕ್ಕೆ ೧೯ನೇಯ ಶತಮಾನದಲ್ಲಿ ಪರಿಚಯವಾಯಿತು. ವಿಶ್ವದ ಅತ್ಯಂತ ಪುರಾತನ ಸಂಸ್ಕೃತಿ ಪ್ರದೇಶಗಳಾದ ಗ್ರೀಕ್, ಲ್ಯಾಟಿನ್, ರೋಮನ್ ಮುಂತಾದ ಪ್ರದೇಶಗಳಲ್ಲಿ ಕಾಣಿಸಿಕೊಂಡು ಭಾರತಕ್ಕೆ ಪರಿಚಯವಾಯಿತು.

ಗ್ರಂಥಸಂಪಾದನ ಶಾಸ್ತ್ರ ಕ್ರಿ.ಪೂ.೬೦೦, ೩೦೦ರವರೆಗೆ ಗ್ರೀಸಿನ ಮುಖ್ಯ ನಗರದಲ್ಲಿ ಮುಖ್ಯ ಪ್ರದೇಶಗಳಾದ ಅಥೇನ್ಸ್, ರೋಮನ್, ಲ್ಯಾಟಿನ್, ಈ ಭಾಷೆಗಳಲ್ಲಿ ಮೊದಲಿಗೆ ಅನೇಕ ಹಸ್ತಪ್ರತಿಗಳ ಕಾರ್ಯವನ್ನು ಪ್ರಾರಂಭಿಸಿದರು. ಗ್ರಂಥಸಂಪಾದನ ಶಾಸ್ತ್ರ ಇಟಲಿ, ಯುರೋಪ್, ಫ್ರಾನ್ಸ್, ಹಾಲೆಂಡ್, ಇಂಗ್ಲೆಂಡ್, ಜರ್ಮನಿ ಮೊದಲಾದ

ಐರೋಪ್ಯ ರಾಷ್ಟ್ರಗಳಲ್ಲಿ ಹಾಗೂ ಅಮೇರಿಕಾ ದೇಶದಲ್ಲಿ ಪ್ರಾಚೀನ ಗ್ರೀಕ್, ಲ್ಯಾಟಿನ್, ಹಿಬ್ರೂ ಸಾಹಿತ್ಯಗಳ ವ್ಯಾಸಂಗ ಮತ್ತು ಗ್ರಂಥಸಂಪಾದನ ಕಾರ್ಯ ಸತತವಾಗಿ ನಡೆಯುತ್ತಲಿತ್ತು ಎಂದು ಹೇಳಬಹುದಾಗಿದೆ.

ಹೀಗೆ ಈ ಶಾಸ್ತ್ರ ಸರ್ವತೋಮುಖವಾಗಿ ಬೆಳೆದು ಗದ್ಯ, ಪದ್ಯ, ನಾಟಕ, ಇತ್ಯಾದಿ ಪ್ರಕಾರಗಳಲ್ಲಿ ಪ್ರಯೋಗಿಸಲ್ಪಟ್ಟು ಒಂದು ಖಚಿತವಾದ ಸ್ವರೂಪವನ್ನು ಪಡೆದುಕೊಳ್ಳುತ್ತಾ ಬಂದಿತು. ಹೀಗೆ ಸ್ವರೂಪವನ್ನು ಪಡೆದುಕೊಳ್ಳುತ್ತಾ ಈ ಶಾಸ್ತ್ರ ೧೯ನೇ ಶತಮಾನದಲ್ಲಿ ಭಾರತವನ್ನು ಪ್ರವೇಶಿಸಿತು.

"ಮ್ಯಾಕ್ಸ್ ಮುಲ್ಲರ್, ಬ್ಲೂಟಿರ್, ಪೀಟರ್‌ಸನ್, ಓಪರ್ಟ್, ಕೋಲಬ್ರೂಕ್, ಯಾಕೋಬಿ ಮೊದಲಾದ ವಿದೇಶಿ ವಿದ್ವಾಂಸರು ಮತ್ತು ಭಂಡಾರ್‌ಕರ್, ಪಿ.ಎಲ್. ವೈದ್ಯ[೩] ಮೊದಲಾದ ಸ್ವದೇಶಿ ವಿದ್ವಾಂಸರ ಕೈಯಲ್ಲಿ ಈ ಶಾಸ್ತ್ರ ಶುದ್ಧರೂಪವನ್ನು ಧರಿಸಿ ಕ್ರಮೇಣ ಈ ದೇಶದಲ್ಲೆಲ್ಲಾ ವ್ಯಾಪಿಸಿತ್ತು."[೩] ಅನಂತರ ಬಹಳ ಮುಖ್ಯ ವಿದ್ವಾಂಸರುಗಳು ಗ್ರಂಥ ಸಂಪಾದನೆಗೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳನ್ನು ಸಂಗ್ರಹಿಸಲುಪಟ್ಟರು.

ಅವರುಗಳಲ್ಲಿ ಮುಖ್ಯರಾದವರು ಡಾ। ಸುಕ್ತಂಕರ್, ಡಾ। ಎಂ.ಎಸ್. ಕತ್ರೆ, ಡಿ.ಎಲ್. ನರಸಿಂಹಾಚಾರ್ಯರು, ತೀ.ನಂ.ಶ್ರೀಕಂಠಯ್ಯನವರು, ಪ್ರೊ। ಡಿ.ಎಸ್. ವೆಂಕಣ್ಣಯ್ಯನವರು, ಎಂ.ಎ. ರಾಮಾನುಜೈಯಂಗಾರ್ಯರು, ಎಂ.ಎಂ. ಕಲಬುರ್ಗಿ, ಆರ್. ನರಸಿಂಹಾಚಾರ್ಯ ಮುಂತಾದ ಸ್ವದೇಶಿ ವಿದ್ವಾಂಸರುಗಳ ಕೈಯಲ್ಲಿ ಈ ಶಾಸ್ತ್ರ ಒಂದು ನಿರ್ದಿಷ್ಟ ಸ್ಥಾನಮಾನವನ್ನು ಪಡೆದುಕೊಂಡಿತು.

ಈ ಪ್ರಬಂಧದಲ್ಲಿ ಮುಖ್ಯವಾಗಿ ತೀ.ನಂ.ಶ್ರೀ.ಯವರು ಗ್ರಂಥಸಂಪಾದನ ಶಾಸ್ತ್ರವನ್ನು ಕುರಿತು ಪರಿಚಯಿಸಲಾಗುತ್ತದೆ. ಅಂದರೆ ತೀ.ನಂ.ಶ್ರೀ.ಯವರ 'ಗ್ರಂಥಸಂಪಾದನ' ಶಾಸ್ತ್ರವು ನಿರ್ದಿಷ್ಟ ಪಥದಲ್ಲಿ ಮುಂದುವರೆದಿರುವುದನ್ನು ಕಾಣಬಹುದಾಗಿದೆ. ಅದರಲ್ಲಿಯೂ ತೀ.ನಂ. ಶ್ರೀಯವರು ಗ್ರಂಥಸಂಪಾದನೆಯ ನಿರ್ದಿಷ್ಟ ಸೂತ್ರಗಳನ್ನು ಅನುಸರಿಸಿ ಕನ್ನಡ ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿರುವುದು ಬಹಳ ಮುಖ್ಯವಾದ ಸಂಗತಿಯಾಗಿದೆ.

ತೀ.ನಂ.ಶ್ರೀಯುವರ ಅಧ್ಯಯನ ಕ್ರಮವು ಪ್ರಾಚೀನ ಗ್ರಂಥಗಳಿಗೆ ಸಂಬಂಧಪಟ್ಟಂತೆ ನಾಲ್ಕು ಹಂತಗಳಲ್ಲಿ ಮುಂದುವರಿದಿರುವುದನ್ನು ಕಾಣಬಹುದಾಗಿದೆ. ಅವು ಯಾವುವುವೆಂದರೆ ಒಂದನೆಯದಾಗಿ "ಹಸ್ತಪತ್ರಿ ಸಂಗ್ರಹಣಾ ಕಾರ್ಯ, ಪಾಠಾಂತರಗಳ ಸಂಕಲನ, ಪಾಠಾಂತರದ ಚಿಹ್ನೆಗಳು, ಕೊನೆಯದಾಗಿ ಪಾಠನಿರ್ಣಯ"[೪] – ಈ ರೀತಿಯಾಗಿ ಕ್ರಮಬದ್ಧ ರೀತಿಯಲ್ಲಿ ತೀ.ನಂ.ಶ್ರೀ.ಯವರ ಗ್ರಂಥಸಂಪಾದನ ಕಾರ್ಯ ಮುಂದುವರಿದಿರುವುದನ್ನು ಕಾಣಬಹುದಾಗಿದೆ.

ತೀ.ನಂ.ಶ್ರೀ.ಯವರು ಕನ್ನಡ ಗ್ರಂಥಸಂಪಾದನೆಗೆ ಕೊಟ್ಟ ಕೊಡುಗೆ ಎಂಬ ವಿಚಾರವನ್ನು ನಾನು ಆಯ್ಕೆ ಮಾಡಿಕೊಂಡಿರಲು ಮುಖ್ಯ ಕಾರಣವೇನೆಂದರೆ, ವಿದೇಶಿ ವಿದ್ವಾಂಸರಲ್ಲಿ ಕಂಡುಬರುವ ಕೆಲವು ವಿಚಾರಗಳು ನಮ್ಮ ಸ್ವದೇಶಿ ವಿದ್ವಾಂಸರಲ್ಲಿ ಇನ್ನೂ ಹೆಚ್ಚಿನದಾಗಿ ಕಂಡುಬರುವುದನ್ನು ಕಾಣಬಹುದಾಗಿದೆ. ಅಂದರೆ ರೆವರೆಂಡ್ ಎಫ್. ಕಿಟಲ್, ಬಿ.ಎಲ್. ರೈಸ್ ಇತ್ಯಾದಿ ವಿದೇಶಿ ವಿದ್ವಾಂಸರು ನಮ್ಮ ಕನ್ನಡ ಗ್ರಂಥಗಳ ಹುಡುಕಾಡುವಿಕೆಯಲ್ಲಿ ಯಾವ ರೀತಿ ಪರಿಶ್ರಮ ವ್ಯಕ್ತಪಡಿಸಿದರು. ಅದೇ ರೀತಿ ಇದಕ್ಕಿಂತ ಎರಡರಷ್ಟು ಪರಿಶ್ರಮ ನಮ್ಮ ಸ್ವದೇಶಿ ವಿದ್ವಾಂಸರಲ್ಲಿದೆ ಎಂದು ಹೇಳಬಹುದು.

ಅದರಲ್ಲಿಯೂ, ತೀ.ನಂ.ಶ್ರೀಯವರ ಬಗ್ಗೆ ಹೇಳಬೇಕೆಂದರೆ ಹಾಗೂ ಅವರ ಕನ್ನಡ ಗ್ರಂಥಗಳ ಪರಿಷ್ಕರಣದ ಬಗ್ಗೆ ನಾವು ಮಾತಾಡಬೇಕಾದರೆ ಅವರ ಅಚಲನಿಷ್ಠೆ ಹಾಗೂ ಶ್ರದ್ಧೆ, ವಿಶ್ವಾಸ, ಅವರ ವಿದ್ವತ್ತು ನಮಗೆ ಇಲ್ಲಿ ಮುಖ್ಯವಾಗುತ್ತದೆ. ನವೋದಯ ಕಾಲಘಟ್ಟದ ಪ್ರಮುಖ ಕವಿಗಳಾಗಿ, ಉತ್ತಮ ಸಂಶೋಧಕರಾಗಿ ಮುಂದುವರಿದವರು ತೀ.ನಂ.ಶ್ರೀಯವರಾಗಿದ್ದಾರೆ.

**೨. ಅಧ್ಯಯನದ ಉದ್ದೇಶ**

ಈ ಪ್ರಬಂಧದ ಮುಖ್ಯ ಉದ್ದೇಶ ಕನ್ನಡ ಗ್ರಂಥಸಂಪಾದನೆಗೆ ತೀ.ನಂ. ಶ್ರೀ.ಯವರು ಕೊಟ್ಟ ಕೊಡುಗೆಯನ್ನು ಕುರಿತು ಸಮಾಲೋಚಿಸಲಾಗುವುದು. ಈ ವಿಷಯವನ್ನು ನಾನು ಆರಿಸಿಕೊಳ್ಳುವ ಕಾರಣವೇನೆಂದರೆ ಗ್ರಂಥಸಂಪಾದನೆಯ ಕೃತಿಯಲ್ಲಿ ಕಂಡುಬರುವ ದೀರ್ಘವಾದ ಪರಿಶ್ರಮ, ನಿರಂತರ ಓದು, ಸತ್ಯದ ಶೋಧನೆ ಇತ್ಯಾದಿ ಅಂಶಗಳು ನನಗೆ ತುಂಬಾ ಆಹ್ಲಾದಕರವಾಗಿ ತಾಳಿತು. ಅದರಲ್ಲೂ ಕನ್ನಡ ಗ್ರಂಥಸಂಪಾದನೆಗೆ ತೀ.ನಂ.ಶ್ರೀ.ಯವರಂಥ ಸಾಧಕರ ಶ್ರಮವನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಈ ಅಧ್ಯಯನದಲ್ಲಿ ಗ್ರಂಥಸಂಪಾದನ ಶಾಸ್ತ್ರದ ಕಿರುಪರಿಚಯ, ಕನ್ನಡ ಹಳೆಯ ಗ್ರಂಥಗಳಾದ ರನ್ನಕವಿಯ 'ಗದಾಯುದ್ಧ ಸಂಗ್ರಹಂ', ಹರಿಹರ ಕವಿಯ 'ನಂಬಿಯಣ್ಣನ ರಗಳೆ'ಯ ಕುರಿತಾದ ಸಂಪಾದಿತ ವಿವರಗಳು. ಈ ಕೃತಿಗಳನ್ನು ಸಂಪಾದಿಸಿದ ಸಂಪಾದಕರ ವಿವರ ಮತ್ತು ಈ ಕೃತಿಗಳನ್ನು ಸಂಪಾದಿಸಿದ ಕಾರ್ಯ ವೈಖರಿಯನ್ನು ಈ ಪ್ರಬಂಧದ ವಿಷಯದಲ್ಲಿ ತಿಳಿಸಲಾಗಿದೆ.

ತೀ.ನಂ.ಶ್ರೀ.ಯವರನ್ನು ಕುರಿತಾದ, ಕನ್ನಡ ಗ್ರಂಥ ಸಂಪಾದನ ಶಾಸ್ತ್ರಕ್ಕೆ ಅವರ ಕೊಡುಗೆಯನ್ನು ಸಮಗ್ರವಾಗಿ ವಿವರಿಸುವುದೇ ಪ್ರಬಂಧದ ಉದ್ದೇಶ. ಮೊದಲಿಗೆ ತೀ.ನಂ.ಶ್ರೀ.ಯವರು ಸಂಪಾದಿಸಿರುವ ಅತ್ಯುತ್ಕೃಷ್ಟ ಕೃತಿಗಳಲ್ಲಿ ಒಂದಾದ ಹರಿಹರನ 'ನಂಬಿಯಣ್ಣನ ರಗಳೆ'ಯನ್ನು ಮೊಟ್ಟ ಮೊದಲು ಸಂಪಾದಿಸಿ ಪ್ರಕಟಿಸಿದ ಕೀರ್ತಿ

ತೀ.ನಂ.ಶ್ರೀ.ಯವರಿಗೆ ಸಲ್ಲುತ್ತದೆ. ಈ ಕೃತಿಯ ಸಂಪಾದನೆಗೆ ತೀ.ನಂ.ಶ್ರೀ.ಯವರು ಐದು ಹಸ್ತಪತ್ರಿಗಳನ್ನು ಸಂಗ್ರಹಿಸಿರುವುದು. ಐದು ಹಸ್ತಪ್ರತಿಗಳಲ್ಲಿ ಕಂಡುಬರುವ ದೋಷಗಳು, ಹಸ್ತಪ್ರತಿಗಳಿಗೆ ಉಪಯೋಗಿಸಿರುವ ಸಾಮಗ್ರಿ, ಅಂದರೆ ಓಲೆಯ ಗರಿಯೇ ಅಥವಾ ಕಾಗದವೇ ಎಂಬುದರ ಬಗ್ಗೆ ಕೆಲವು ಸಮಂಜಸವಾದ ಕೆಲವು ಹೇಳಿಕೆಗಳು ಹಸ್ತಪ್ರತಿಗಳ ಸ್ವರೂಪ, ಲಿಪಿಕಾರರ ಸ್ವಂತ ಬರಹದ ಪೀಠಿಕಾವಾಕ್ಯಗಳು ಮತ್ತು ಸಮಾಪ್ತಿ ವಾಕ್ಯಗಳು. ಆ ಹಸ್ತಪ್ರತಿಯಲ್ಲಿರುವ ಬರೆವಣಿಗೆಯ ರೀತಿ, ಹಸ್ತಪ್ರತಿಗಳ ದುಃಸ್ಥಿತಿ, ಸುಸ್ಥಿತಿಯ ಮಟ್ಟ, ಇವುಗಳನ್ನು ತೀ.ನಂ.ಶ್ರೀ.ಯವರು ಗುರುತಿಸಿದ್ದಾರೆ. ಈ ರೀತಿಯಾದ 'ನಂಬಿಯಣ್ಣ'ನ ಕೃತಿಯ ಸಂಪಾದನೆಯ ಸಂದರ್ಭದಲ್ಲಿ ತೀ.ನಂ.ಶ್ರೀ.ಯವರ ಪರಿಶ್ರಮ, ತೀ.ನಂ.ಶ್ರೀ.ಯವರ ಇನ್ನೊಂದು ಪ್ರಾಚೀನ ಕೃತಿಯಾದ ರನ್ನಕವಿಯ 'ಗದಾಯುದ್ದ ಸಂಗ್ರಹಂ'. ತೀ.ನಂ.ಶ್ರೀ.ಯವರು ಸಂಪಾದಿಸಿದ ಇನ್ನೊಂದು ವಿದ್ವತ್ಪೂರ್ಣ ಕೃತಿ ಇದು. ೯೨ ಪುಟಗಳಷ್ಟು ಪಠ್ಯಭಾಗವಿರುವ ಈ ಸಂಗ್ರಹಕ್ಕೆ ಕೊಟ್ಟಿರುವ ಟಿಪ್ಪಣಿ ೧೧೬ ಪುಟಗಳಷ್ಟು. "ಈ ಟಿಪ್ಪಣಿಗಳು ಹಳಗನ್ನಡ ಭಾಷೆ ಮತ್ತು ಕಾವ್ಯಗಳನ್ನು ಅಭ್ಯಾಸ ಮಾಡುವವರಿಗೆ ಒಂದು ಅನನ್ಯವಾದ ವಸ್ತುಕೋಶವಾಗಿರುವುದಲ್ಲದೆ ಹಳೆಯ ಕಾವ್ಯಗಳಿಗೆ ಬರೆಯಬೇಕಾದ ಟಿಪ್ಪಣಿಗಳಿಗೆ ಒಂದು ಮಾದರಿಯೂ ಆಗಿವೆ"[೩] ಎಂದು ತೀ.ನಂ.ಶ್ರೀ. ಯವರ ಹತ್ತಿರ ಶಿಷ್ಯರಾದ ಪ್ರೊ| ಎಚ್.ಜಿ. ಸಣ್ಣಗುಡ್ಡಯ್ಯನವರು ಈ ಮೇಲಿನ ಮಾತನ್ನು ಹೇಳುತ್ತಾರೆ.

ತೀ.ನಂ.ಶ್ರೀ.ಯವರ ರನ್ನನ ಗದಾಯುದ್ಧ ಕೃತಿಯನ್ನು ಸಂಪಾದಿಸುವಾಗ ಪಟ್ಟ ಪರಿಶ್ರಮವು ಮೇಲಿನ ಮಾತುಗಳಲ್ಲಿ ವ್ಯಕ್ತವಾಗುತ್ತದೆ. ಈ ಕೃತಿಯನ್ನು ಸಂಪಾದಿಸಲು ತೀ.ನಂ.ಶ್ರೀ.ಯವರು ರನ್ನನ ಪದ್ಯ ಉಲ್ಲೇಖಗೊಂಡಿರುವ ಹಿಂದಿನ ಕಾವ್ಯ ಸಂಕಲನಗಳು, ಬಿ.ಎಂ.ಶ್ರೀ.ಯವರ 'ಗದಾಯುದ್ಧ' ನಾಟಕವನ್ನು ಕೆಲವು ಸಂಸ್ಕೃತ ಆಕರಗಳನ್ನು ತಮ್ಮ ಸಂಪಾದನ ಸಾಮಗ್ರಿಯಾಗಿ ಬಳಸಿಕೊಂಡಿರುವ ಇವರ ಅಧ್ಯಯನದ ಅಥವಾ ಸಂಪಾದನ ಕಾರ್ಯದ ಹಿನ್ನಲೆಯಲ್ಲಿ ನಮಗೆ ತಿಳಿದು ಬರುತ್ತದೆ.

ತೀ.ನಂ.ಶ್ರೀ.ಯವರು ಈ ಹಳೆಯ ಕೃತಿಗಳಲ್ಲಿ ಕೆಲವು ಪದ್ಯಗಳಿಗೆ ಪಾಠಾಂತರಗಳನ್ನು ಕೊಡುವಲ್ಲಿ ವಹಿಸಿರುವ ಅವರ ಎಚ್ಚರದ ಮನಸ್ಸು ಬಹಳ ಸೂಕ್ಷ್ಮವಾದುದು ಎಂದು ಹೇಳಬಹುದು. ಇವೆರಡೂ ಕೃತಿಗಳು ಕನ್ನಡ ಗ್ರಂಥಸಂಪಾದನ ಕ್ಷೇತ್ರದಲ್ಲಿ ಚಿರಸ್ಮರಣೀಯವಾಗಿದೆ. ಈ ಕೃತಿಗಳನ್ನು ಸಂಪಾದನೆಯಲ್ಲಿ ತೊಡಗಿದ ತೀ.ನಂ.ಶ್ರೀ.ಯವರ ಸೇವೆ ಬಹಳ ಪ್ರಮುಖವಾದುದು.

ಇವೆರಡು ಕೃತಿಗಳಲ್ಲಿ ಕಂಡುಬರುವ ಸಂಶೋಧನ ದೃಷ್ಟಿ ಬಹಳ ಅಮೋಘವಾದುದು ಮತ್ತು ಎಚ್ಚರವಾದುದು ಎಂದು ತಿಳಿಯಬಹುದು. ತೀ.ನಂ.ಶ್ರೀ. ಯವರ ಈ ಗ್ರಂಥಸಂಪಾದನೆಗೆ ಕುರಿತಂತೆ ಸಾಧನೆಯನ್ನು ಚರ್ಚಿಸುತ್ತದೆ. ಈ ಅಧ್ಯಯನದ ಪ್ರಮುಖ ಉದ್ದೇಶ. ತೀ.ನಂ.ಶ್ರೀ.ಯವರು ಕನ್ನಡ ಗ್ರಂಥ ಸಂಪಾದನ ಶಾಸ್ತ್ರಕ್ಕೆ ಕೊಟ್ಟ ಕೃತಿರತ್ನಗಳನ್ನು ಪರಾಮರ್ಶಿಸುವುದೇ ಈ ಅಧ್ಯಯನದ ಗುರಿ.

## ೩. ಅಧ್ಯಯನದ ಸ್ವರೂಪ

ಈ ಅಧ್ಯಯನವು ಮುಖ್ಯವಾಗಿ ಕನ್ನಡ ಗ್ರಂಥ ಸಂಪಾದನೆ ತೀ.ನಂ.ಶ್ರೀ. ಯವರ ಕೊಡುಗೆಯನ್ನು ಕುರಿತು ಚರ್ಚಿಸಲಾಗುತ್ತದೆ. ಈ ಪ್ರಬಂಧದಲ್ಲಿ ಅಧ್ಯಯನ ವಿಷಯಕ್ಕೆ ಸಂಬಂಧಪಟ್ಟಂತೆ ಐದು ಅಧ್ಯಾಯಗಳಾಗಿ ವಿಭಾಗ ಮಾಡಿಕೊಂಡಿದ್ದೇನೆ. ಅದರಲ್ಲೂ ಮೊದಲನೆಯ ಅಧ್ಯಾಯದಲ್ಲಿ ಗ್ರಂಥಸಂಪಾದನೆಯನ್ನು ಕುರಿತ ಕೆಲವು ಸಣ್ಣಪುಟ್ಟ ಮಾಹಿತಿ, ತೀ.ನಂ.ಶ್ರೀ.ಯವರ ಕನ್ನಡ ಗ್ರಂಥಸಂಪಾದನೆಗೆ ಸಂಬಂಧಪಟ್ಟ ಮಾಹಿತಿ, ಉದ್ದೇಶ, ಇತ್ಯಾದಿ ವಿಚಾರಗಳನ್ನು ಒಳಗೊಂಡಿದೆ.

ಎರಡನೇ ಅಧ್ಯಾಯದಲ್ಲಿ ತೀ.ನಂ.ಶ್ರೀ ಮತ್ತು ಕನ್ನಡ ವಿದ್ವತ್ ಪರಂಪರೆ, ಇದರಲ್ಲಿ ಬರುವ ವಿಷಯಗಳು ಯಾವುವೆಂದರೆ ತೀ.ನಂ.ಶ್ರೀ.ಯವರ ವ್ಯಕ್ತಿತ್ವ, ತೀ.ನಂ.ಶ್ರೀ. ಯವರ ಸಾಧನೆಗಳು, ತೀ.ನಂ.ಶ್ರೀ. ಅವರ ಸಮಕಾಲೀನ ವಿದ್ವತ್ ಪರಂಪರೆ, ಕನ್ನಡ ವಿದ್ವತ್ ಪರಂಪರೆಗೆ ತೀ.ನಂ.ಶ್ರೀ.ಯವರ ಕೊಡುಗೆ ಎಂಬ ಉಪವಿಭಾಗಗಳನ್ನು ಮಾಡಿಕೊಂಡಿದ್ದೇನೆ.

ಮೂರನೇ ಅಧ್ಯಾಯದಲ್ಲಿ ತೀ.ನಂ.ಶ್ರೀ.ಯವರ ಸಂಪಾದಿತ ಗ್ರಂಥಗಳ ವಿವರವನ್ನು ಕೊಟ್ಟಿದ್ದೇನೆ. ಅದರಲ್ಲಿ ಬರುವ ವಿಷಯಗಳೆಂದರೆ ಕೃತಿಗಳಿಗೆ ಸಂಬಂಧಪಟ್ಟ ಸಂಪಾದನಾ ಕಾರ್ಯ, ಸಂಪಾದನಾ ಕಾರ್ಯದಲ್ಲಿ ತೀ.ನಂ.ಶ್ರೀ.ಯವರ ಪರಿಶ್ರಮ ಇವುಗಳನ್ನು ಕುರಿತು ವಿವರಣೆ ಕೊಡಲಾಗುತ್ತದೆ. ಒಟ್ಟಾರೆ ಹೇಳುವುದಾದರೆ ಈ ಎರಡು ಪ್ರಾಚೀನ ಕೃತಿಗಳು ಕನ್ನಡ ಗ್ರಂಥಸಂಪಾದನೆಗೆ ತೀ.ನಂ.ಶ್ರೀ. ಯವರ ಅಮೂಲ್ಯವಾದ ಕೊಡುಗೆಯಾಗಿದೆ.

ನಾಲ್ಕನೇ ಅಧ್ಯಯನದಲ್ಲಿ ತೀ.ನಂ.ಶ್ರೀ. ಯವರ ಈ ಮೇಲಿನ ಎರಡು ಪ್ರಾಚೀನ ಕೃತಿಗಳನ್ನು ಬಿಟ್ಟು ಕೆಲವು ಬಿಡಿ ಲೇಖನಗಳನ್ನು ಅಂದರೆ ಸಂಶೋಧನಾ ಲೇಖನಗಳನ್ನು ಸಂಪಾದಿಸಿದ್ದಾರೆ. ಅವುಗಳನ್ನು ಕುರಿತಾದ ವಿವರಣೆ ನಾಲ್ಕನೇ ಅಧ್ಯಾಯದಲ್ಲಿ ಅಡಗಿವೆ. ಅದರಲ್ಲೂ ಮುಖ್ಯವಾಗಿ ಹೆಣ್ಣುಮಕ್ಕಳ ಪದಗಳು, 'ಕೆರೆಗೆ ಹಾರ', 'ಎನಿತ್ತೆನಿತಂಬುಜ ಪತ್ರನೇತ್ರಯ' (ಶಾಸನ ಪಧ್ಯ), 'ಅನಂತನಾಥ ಪುರಾಣ' (ಪರಿಷ್ಕರಣ), 'ರಸರತ್ನಾಕರ' (ಪರಿಷ್ಕರಣ) ಇತ್ಯಾದಿ ವಿಷಯಗಳನ್ನು ಕುರಿತು ಕೆಲವು ವಿವರಗಳು ಈ ವಿಭಾಗದಲ್ಲಿ ಅಡಕಗೊಂಡಿವೆ.

ಐದನೇ ಅಧ್ಯಾಯದಲ್ಲಿ ತೀ.ನಂ.ಶ್ರೀ. ಯವರ ಗ್ರಂಥ ಸಂಪಾದನೆಯ ವೈಶಿಷ್ಟ್ಯವನ್ನು ಕುರಿತು ತಿಳಿಸಲಾಗುತ್ತದೆ. ಅದರಲ್ಲಿ ಕೆಲವು ಉಪವಿಭಾಗಗಳು ಈ ಕೆಳಕಂಡಂತೆ ಇದೆ. ಒಂದನೆಯದಾಗಿ ಪಾಠಾಂತರಗಳು ಎರಡನೇಯದಾಗಿ ತೀ.ನಂ.ಶ್ರೀ.ಯುವರು ಪಾಠಪರಿಷ್ಕರಣದಲ್ಲಿ ಬಳಸಲಾದ ಚಿಹ್ನೆಗಳ ವಿವರ. ಮೂರನೇಯದಾಗಿ ಸಂಪಾದನೆಯ ವಿವರ. ಈ ಭಾಗದಲ್ಲಿ ತೀ.ನಂ.ಶ್ರೀ.ಯವರ ಗ್ರಂಥಸಂಪಾದನೆ ಕಾರ್ಯಕ್ಕೆ ಸಂಬಂಧಪಟ್ಟಂತೆ ಹಸ್ತಪ್ರತಿಗಳ ಸಂಗ್ರಹಣ, ಪಾಠಾಂತರಗಳ

ಸಂಕಲನ. ಪಾಠಾಂತರದ ಚಿಹ್ನೆಗಳು, ಪಾಠನಿರ್ಣಯ, ಅದರಲ್ಲಿ ಗ್ರಂಥಪಾಠವಾಗಿರುವ ಕಡೆ ತೀ.ನಂ.ಶ್ರೀ. ಯವರು ಬಳಸಿರುವ ಚಿಹ್ನೆಗಳು ಬಹಳ ಉಪಯುಕ್ತವಾದುದು ಎಂದು ಹೇಳಬಹುದು.

ಈ ಪ್ರಬಂಧದ ಕೊನೆಯ ಅಧ್ಯಾಯ ಸಮಾರೋಪ. ಈ ಭಾಗದಲ್ಲಿ ತೀ.ನಂ.ಶ್ರೀ.ಯವರ ಒಟ್ಟಾರೆ ಸಾಧನೆಯನ್ನು, ಕನ್ನಡ ಗ್ರಂಥಸಂಪಾದನೆಯ ಕೃತಿಗಳನ್ನು ಕುರಿತಾದ ಒಟ್ಟಾರೆ ನಿಲುವುಗಳನ್ನು ಹೇಳಲಾಗಿದೆ. ಅದರಲ್ಲಿ ಅಂದರೆ ಈ ಅಧ್ಯಾಯದಲ್ಲಿ ಮೂರು ಉಪವಿಭಾಗಗಳನ್ನು ಮಾಡಿಕೊಂಡಿದ್ದೇನೆ. ಮೊದಲನೆಯದು ಶಿಷ್ಟಸಾಹಿತ್ಯ ಮತ್ತು ತೀ.ನಂ.ಶ್ರೀ. ಎರಡನೇಯ ಭಾಗ – ಜನಪದ ಸಾಹಿತ್ಯ ಮತ್ತು ತೀ.ನಂ.ಶ್ರೀ., ಮೂರನೆಯದಾಗಿ ಕನ್ನಡ ಗ್ರಂಥಸಂಪಾದನೆ ಮತ್ತು ತೀ.ನಂ.ಶ್ರೀ. ಈ ರೀತಿಯಾದ ಉಪವಿಭಾಗಗಳು. ಈ ಭಾಗದಲ್ಲಿ ಒಟ್ಟಾರೆಯಾಗಿ ತೀ.ನಂ.ಶ್ರೀ.ಯವರ ಗ್ರಂಥಗಳ ಸಂಪಾದಿತ ವಿವರ. ತೀ.ನಂ.ಶ್ರೀ.ಯವರ ಆಸಕ್ತಿಯ ಕ್ಷೇತ್ರಗಳಲ್ಲಿ ತೀ.ನಂ.ಶ್ರೀ.ಯವರ ಸಾಧನೆ, ಅದರ ಚರ್ಚೆ, ವಿವರಣೆ ಇತ್ಯಾದಿ ಅಂಶಗಳನ್ನು ಒಳಗೊಂಡಿದೆ.

ಈ ಅಧ್ಯಯನ ಸ್ವರೂಪ ಭಾಗವು ತೀ.ನಂ.ಶ್ರೀ.ಯವರು, ಕನ್ನಡ ಗ್ರಂಥಸಂಪಾದನೆಗೆ ಕೊಟ್ಟ ಕೊಡುಗೆಯನ್ನು ಹಲವಾರು ಅಧ್ಯಾಯ ಹಾಗೂ ಉಪ ಅಧ್ಯಾಯಗಳಾಗಿ ಭಾಗ ಮಾಡಿ ವಿವರಿಸಲಾಗಿದೆ. ಇದರ ಸ್ವರೂಪವು ಗ್ರಂಥಸಂಪಾದನೆಯ ರೀತಿಯಲ್ಲಿ ಹಾಗೂ ಅನುಸೂಚಿತವನ್ನು ಒಳಗೊಂಡು ಮುಂದುವರಿಯುತ್ತದೆ. ಗ್ರಂಥಸಂಪಾದನೆಯ ಹಲವಾರು ವಿವರಗಳು ಈ ಭಾಗದಲ್ಲಿ ಮೂಡಿಬರುತ್ತದೆ. ಅದರಲ್ಲೂ ವಿಶೇಷವಾಗಿ ತೀ.ನಂ.ಶ್ರೀ. ಮತ್ತು ಅವರ ಗ್ರಂಥಸಂಪಾದನೆಯನ್ನು ಕುರಿತ ಹತ್ತು ಹಲವು ವಿಚಾರಗಳನ್ನು ಕುರಿತು ಈ ಪ್ರಬಂಧ ಚರ್ಚಿಸುತ್ತದೆ.

## ೪. ಅಧ್ಯಯನದ ವ್ಯಾಪ್ತಿ

ಈ ಪ್ರಬಂಧದ ವ್ಯಾಪ್ತಿಯು ಬಹಳ ಸೀಮಿತವಾದುದು. ಅದರಲ್ಲೂ ಮುಖ್ಯವಾಗಿ ಕನ್ನಡ ಗ್ರಂಥಸಂಪಾದನೆಗೆ ತೀ.ನಂ.ಶ್ರೀ.ಯವರ ಕೊಡುಗೆಯನ್ನು ಕುರಿತು ಹೇಳಲಾಗುತ್ತದೆ. ತೀ.ನಂ.ಶ್ರೀ.ಯವರ ಆಸಕ್ತಿಯ ಕ್ಷೇತ್ರಗಳು ಹಲವು. ಅವುಗಳಲ್ಲಿ ಮುಖ್ಯವಾಗಿ ವಿಮರ್ಶೆ, ಅನುವಾದ, ಸಂಶೋಧನೆ, ಭಾಷೆ, ಶಾಸನ, ಜಾನಪದ, ಗ್ರಂಥಸಂಪಾದನೆ ಇತ್ಯಾದಿ ಕ್ಷೇತ್ರಗಳು. ಈ ಪ್ರಬಂಧದಲ್ಲಿ ಮುಖ್ಯವಾಗಿ ತೀ.ನಂ.ಶ್ರೀ.ಯವರನ್ನು ಕುರಿತ ಗ್ರಂಥಸಂಪಾದನ ಶಾಸ್ತ್ರದ ಬಗ್ಗೆ ಹಲವು ವಿಚಾರಗಳು ವ್ಯಕ್ತವಾಗಿದೆ.

ಈ ಪ್ರಬಂಧದ ವ್ಯಾಪ್ತಿಯು ಕೇವಲ ತೀ.ನಂ.ಶ್ರೀ.ಯವರ ಗ್ರಂಥಸಂಪಾದನ ಶಾಸ್ತ್ರಕ್ಕೆ ಒಳಪಟ್ಟದ್ದು. ಅವರ ಇತರ ಕ್ಷೇತ್ರಗಳನ್ನು ಹೊರತು ಪಡಿಸಿ ಗ್ರಂಥಸಂಪಾದನೆಯ ವಿಷಯುವನ್ನೇ ಆರಿಸಿಕೊಂಡಿದ್ದೇನೆ. ಕನ್ನಡ ಗ್ರಂಥಸಂಪಾದನೆ ಕ್ಷೇತ್ರದಲ್ಲಿ

ತೀ.ನಂ.ಶ್ರೀ.ಯವರು ಮಾಡಿದ ಸಾಧನೆಯನ್ನು ಈ ಪ್ರಬಂಧ ಚಿತ್ರಿಸುತ್ತದೆ. ಅದರಲ್ಲೂ ಕನ್ನಡ ಗ್ರಂಥಸಂಪಾದನೆ ಕ್ಷೇತ್ರಕ್ಕೆ ತೀ.ನಂ.ಶ್ರೀ.ಯವರ ಕೊಡುಗೆಯನ್ನು ಕುರಿತು ವಿಶ್ಲೇಷಿಸುತ್ತದೆ.

ತೀ.ನಂ.ಶ್ರೀ.ಯವರು ಉತ್ತಮ ಸಂಶೋಧಕರಾಗಿದ್ದು, ಕನ್ನಡದ ಕೆಲವು ಪ್ರಾಚೀನ ಕೃತಿಗಳನ್ನು ಸಂಪಾದಿಸಿದ್ದಾರೆ. ಅದರಲ್ಲಿ ಮುಖ್ಯವಾಗಿ ಹತ್ತನೆಯ ಶತಮಾನದ ಚಂಪೂಕೃತಿಯಾದ 'ಗದಾಯುದ್ಧ' ಹಾಗೂ ಹದಿಮೂರನೆ ಶತಮಾನದ ಹರಿಹರನ ಪ್ರಮುಖ ರಗಳೆಯಾದ 'ನಂಬಿಯಣ್ಣನ ರಗಳೆ'ಯನ್ನು ಗ್ರಂಥಸಂಪಾದನೆಯ ನಿಯಮಗಳಿಗೆ ಅನುಸಾರವಾಗಿ ಸಂಪಾದಿಸಿ ಕೊಟ್ಟಿದ್ದಾರೆ. ಈ ಮೇಲಿನ ಕೃತಿಗಳನ್ನು ಕುರಿತಾದ ಕೆಲವು ವಿಚಾರಗಳು ಈ ಪ್ರಬಂಧದ ವ್ಯಾಪ್ತಿಯಲ್ಲಿ ಕಂಡುಬರುತ್ತದೆ. ಅದಲ್ಲದೆ ತೀ.ನಂ.ಶ್ರೀ.ಯವರು ಸಂಪಾದಿಸಿರುವ ಕೆಲವು ಬಿಡಿಲೇಖನಗಳನ್ನು ಕುರಿತಾದ ಕೆಲವು ವಿಷಯಗಳು ಈ ಪ್ರಬಂಧದ ವ್ಯಾಪ್ತಿಯಲ್ಲಿ ಬರುತ್ತದೆ. ಒಟ್ಟಾರೆ ತೀ.ನಂ.ಶ್ರೀ.ಯವರ ಪಾಂಡಿತ್ಯವು ಹಲವು ರೀತಿಯಲ್ಲಿ ಮುಂದುವರಿಯುವಂತಹುದು. ಆದರೆ ತೀ.ನಂ.ಶ್ರೀ. ಹಾಗೂ ಗ್ರಂಥಸಂಪಾದನ ಶಾಸ್ತ್ರಕ್ಕೆ ಇರುವ ನಂಟನ್ನು ಈ ಪ್ರಬಂಧದಲ್ಲಿ ಕಾಣಬಹುದಾಗಿದೆ. ತೀ.ನಂ.ಶ್ರೀ.ಯವರಿಗೆ ಹಲವು ಪ್ರಕಾರಗಳಲ್ಲಿ ಆಸಕ್ತಿ ಇತ್ತು ಎಂಬುದನ್ನು ಮುಂದಿನ ಭಾಗದಲ್ಲಿ ಕಾಣಬಹುದಾಗಿದೆ.

ಆದರೆ ತೀ.ನಂ.ಶ್ರೀಯವರು 'ಭಾಷಾಶಾಸ್ತ್ರ'ದ ಬಗ್ಗೆ ಉತ್ತಮ ಪಾಂಡಿತ್ಯವನ್ನು ಹೊಂದಿದವರಾಗಿದ್ದರು. ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಹಲವು ಗ್ರಂಥಗಳನ್ನು ತೀ.ನಂ.ಶ್ರೀ.ಯವರು ಪ್ರಕಟಿಸಿದ್ದಾರೆ. ಅದರಲ್ಲಿ ಮುಖ್ಯವಾಗಿ ಕನ್ನಡ ಮಾಧ್ಯಮ ವ್ಯಾಕರಣ, ದ್ರಾವಿಡ ಭಾಷಾವಿಜ್ಞಾನ – ಇವು ಮಹತ್ವದ ಕೃತಿಗಳು. ಭಾಷಾಶಾಸ್ತ್ರದ ಉತ್ತಮ ಪಂಡಿತರಾಗಿದ್ದರು ಎಂದು ಹೇಳಬಹುದು.

ಅದೇ ರೀತಿ ವಿಮರ್ಶೆ ಕ್ಷೇತ್ರದಲ್ಲಿಯೂ ತೀ.ನಂ.ಶ್ರೀ.ಯವರು ಬಹಳ ಘನವಾದ ವಿದ್ವತ್ತನ್ನು ಗಳಿಸಿದರು ಎಂದು ಹೇಳಬಹುದು. ಭಾರತೀಯ ಕಾವ್ಯಮೀಮಾಂಸೆ, 'ಸಮಾಲೋಕನ' ಎನ್ನುವ ವಿವರ ವಿಮರ್ಶಾಕೃತಿಗಳು ಇಂದಿಗೂ ಪ್ರಸಿದ್ಧವಾಗಿದೆ ಎಂದು ಹೇಳಬಹುದು. 'ಭಾರತೀಯ ಕಾವ್ಯಮೀಮಾಂಸೆ' ಎನ್ನುವ ಪ್ರೌಢಗ್ರಂಥಕ್ಕೆ ಮರಣೋತ್ತರ ಪಂಪ ಪ್ರಶಸ್ತಿಯು ಬಂದಿದೆ ಎಂದು ಹೇಳಬಹುದಾಗಿದೆ. ಅಂದರೆ ತೀ.ನಂ.ಶ್ರೀ.ಯವರು ವಿಮರ್ಶಾ ಕ್ಷೇತ್ರದಲ್ಲಿಯೂ ಉತ್ತಮ ಪಾಂಡಿತ್ಯವನ್ನು ಪಡೆದಿದ್ದರು ಎಂದು ಗೊತ್ತಾಗುತ್ತದೆ.

ಅದೇ ರೀತಿಯ ಉತ್ತಮ ಕವಿಯು ಅಥವಾ ಕಾವ್ಯ ಪ್ರೇಮಿಗಳು ಆಗಿದ್ದರೂ ಎಂದು ಹೇಳುವುದಕ್ಕೆ ಒಂದೇ ಒಂದು ಸಾಕ್ಷಿಯೆಂದರೆ ಹಳಗನ್ನಡ ಕಾವ್ಯಗಳ ಸಂಚಲನೆ, ರನ್ನನ ಗದಾಯುದ್ಧ, ನಂಬಿಯಣ್ಣನ ರಗಳೆ. ಅದೇ ರೀತಿ ಸ್ವತಃ ತೀ.ನಂ.ಶ್ರೀಯವರು ಒಂದು ಕವನ ಸಂಕಲನವನ್ನು ಪ್ರಕಟಿಸಿದ್ದಾರೆ. ಅದು ಯಾವುದೆಂದರೆ 'ಒಲುಮೆ'

ಕವಿತಾ ಸಂಗ್ರಹ ಕನ್ನಡ ಪ್ರೇಮಕಾವ್ಯಕ್ಕೆ ಮೇಲ್ಪಂಕ್ತಿ ಹಾಕಿಕೊಟ್ಟ ಕೃತಿ ಎಂದು ಹೇಳಬಹುದು. ಅದೇ ರೀತಿ ಪ್ರಬಂಧ ಕ್ಷೇತ್ರದಲ್ಲಿಯೂ ಘನವಾದ ಪಾಂಡಿತ್ಯವನ್ನು ತೀ.ನಂ.ಶ್ರೀ.ಯವರು ಸಾಧಿಸಿದರು ಎಂಬುದಕ್ಕೆ ಉತ್ತಮ ನಿದರ್ಶನಗಳು. ಕೆಲವು ಪ್ರಬಂಧ ಕೃತಿಗಳು. 'ನೆಗಡಿ', 'ಕಾಸಿನ ಸಂಘ' ಇತ್ಯಾದಿ ಕೃತಿಗಳು, ಇತ್ಯಾದಿ ಕ್ಷೇತ್ರಗಳು.

ಅಂದರೆ ತೀ.ನಂ.ಶ್ರೀ.ಯವರ ಆಸಕ್ತಿಯ ಕ್ಷೇತ್ರಗಳು ಹಲವಾರು ಎಂದು ಹೇಳಬಹುದು. ಆದರೆ ನಾನು ಈ ಅಧ್ಯಯನ ವಿಷಯದಲ್ಲಿ ಭಾಷೆ, ವಿಮರ್ಶೆ, ಕಾವ್ಯ, ಪ್ರಬಂಧ, ಇತ್ಯಾದಿ ಕ್ಷೇತ್ರಗಳನ್ನು ಹೊರತು ಪಡಿಸುತ್ತಿದ್ದೇನೆ. ಏಕೆಂದರೆ, ಪ್ರಬಂಧದ ವ್ಯಾಪ್ತಿಯು ಸೀಮಿತವಾದುದರಿಂದ ತೀ.ನಂ.ಶ್ರೀ.ಯವರು ಗ್ರಂಥಸಂಪಾದನಾ ಕ್ಷೇತ್ರವನ್ನೇ ಆಯ್ಕೆ ಮಾಡಿಕೊಂಡಿದ್ದೇನೆ. ಈ ಕ್ಷೇತ್ರದಲ್ಲಿ ತೀ.ನಂ.ಶ್ರೀ.ಯವರ ಸಾಧನೆ ಹಾಗೂ ಅವರ ಅಭಿರುಚಿಯನ್ನು ಕುರಿತು ವಿವರಿಸಿದ್ದೇನೆ. ತೀ.ನಂ.ಶ್ರೀ.ಯವರಂತಹ ಉತ್ತಮ ಪಂಡಿತರ ಬಗ್ಗೆ ಹೇಳುವುದು ಹಾಗೂ ಅವರ ಗ್ರಂಥಸಂಪಾದನಾ ಶಾಸ್ತ್ರದ ರೀತಿ ನೀತಿಗಳನ್ನು ಕುರಿತು ಚರ್ಚಿಸುವುದು, ಈ ಪ್ರಬಂಧದ ವ್ಯಾಪ್ತಿಯು ಕನ್ನಡ ಗ್ರಂಥಸಂಪಾದನೆ ತೀ.ನಂ.ಶ್ರೀ.ಯವರ ಕೊಡುಗೆ. ಈ ವಿಚಾರವನ್ನೇ ಕುರಿತು ಹಲವು ಹಂತಗಳಲ್ಲಿ ವಿವರಿಸಲಾಗುತ್ತದೆ.

* * *

**ಅಡಿಟಿಪ್ಪಣಿ**

೧. ಎಂ.ಎಂ. ಕಲಬುರ್ಗಿ – ಕನ್ನಡ ಗ್ರಂಥಸಂಪಾದನ ಶಾಸ್ತ್ರ, ಸಮಾಜ ಪುಸ್ತಕಾಲಯ ಧಾರವಾಡ, ಪು.೪, ೧೯೭೨.

೨. ಡಾ। ಎಸ್.ವಿದ್ಯಾಶಂಕರ್ – ಸಮಾಹಿತ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ಪು.೨೫೫–೨೫೬, ೨೦೦೪.

೩. ಎಂ.ಎಂ. ಕಲಬುರ್ಗಿ – ಕನ್ನಡ ಗ್ರಂಥಸಂಪಾದನ ಶಾಸ್ತ್ರ, ಸಮಾಜ ಪುಸ್ತಕಾಲಯ ಧಾರವಾಡ, ಪು.೪–೫, ೧೯೭೨.

೪. ಡಾ। ಎಂ.ಚಿದಾನಂದಮೂರ್ತಿ – ಶ್ರೀಕಂಠತೀರ್ಥ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ಪು.೨೧೧, ೧೯೭೬.

೫. ಪ್ರೊ। ಎಚ್.ಜಿ. ಸಣ್ಣಗುಡ್ಡಯ್ಯ – ತೀ.ನಂ.ಶ್ರೀಕಂಠಯ್ಯ ಅಕ್ಷಯ ಪ್ರಕಾಶನ, ತುಮಕೂರು, ಪು.೩೬, ೨೦೦೪.

# ಅಧ್ಯಾಯ-2

# ತೀ.ನಂ.ಶ್ರೀ ಮತ್ತು ಕನ್ನಡ ವಿದ್ವತ್ ಪರಂಪರೆ

## ತೀ.ನಂ.ಶ್ರೀಯವರ ವ್ಯಕ್ತಿತ್ವ

ತೀ.ನಂ.ಶ್ರೀಯವರು ಮೆಚ್ಚುಗೆಗಾಗಿ ಬದುಕಿದವರಲ್ಲ. ಬದಲಾಗಿ ಜ್ಞಾನಕ್ಕಾಗಿ ಬದುಕಿದವರು. ಅವರು ಬರೆದದ್ದು ವಾಸ್ತವವಾಗಿ ಕಡಿಮೆ. ಇದಕ್ಕೆ ಕಾರಣ ಪ್ರತಿಯೊಂದರಲ್ಲಿ ಪರಿಪೂರ್ಣತೆಯನ್ನು ನಿರೀಕ್ಷಿಸಿದ್ದು. ಆದರೆ ಅವರು ಬರೆದಿದ್ದಲ್ಲ ಬೆಲೆಯುಳ್ಳದ್ದು ಎಂದು ಹೇಳಬಹುದಾಗಿದೆ.

ಕನ್ನಡ ಗ್ರಂಥಸಂಪಾದನಾ ಕ್ಷೇತ್ರಕ್ಕೆ ಅವರದೇ ಆದ ಕೊಡುಗೆಗಳನ್ನು ಕೊಟ್ಟಿದ್ದಾರೆ. ಪಾಂಡಿತ್ಯ ರಸಿಕತೆಗಳ ಅಪೂರ್ವ ಸಂಗಮವಾಗಿದ್ದ ಅವರೊಡನೆ ಇನ್ನೊಬ್ಬರನ್ನು ಹೋಲಿಸಲು ಕಷ್ಟವಾದೀತು. ಬೇರೆ ಆಕರ್ಷಣೆಗಳನ್ನು ತೊರೆದು ಕೇವಲ ಉಪಾಧ್ಯಾಯ ಜೀವನವನ್ನೇ ಆರಿಸಿಕೊಂಡ ಅವರು ಮೈಸೂರು, ಕರ್ನಾಟಕ, ಪುಣೆ ವಿಶ್ವವಿದ್ಯಾಲಯಗಳ ಸಾವಿರಾರು ವಿದ್ಯಾರ್ಥಿಗಳಿಗೆ ಜ್ಞಾನಜ್ಯೋತಿಯನ್ನು ನೀಡಿದವರು. ಕರ್ನಾಟಕದಲ್ಲಿ ಮಾತ್ರವಲ್ಲದೆ ಪಾಶ್ಚಾತ್ಯದೇಶಗಳಲ್ಲಿಯೂ ಕೂಡ ಖ್ಯಾತರಾಗಿ ಕನ್ನಡ ವಿದ್ವತ್‌ಗೆ ಗೌರವವನ್ನು ತಂದುಕೊಟ್ಟ ತೀ.ನಂ.ಶ್ರೀಯವರು ಅಪ್ಪಟ ವಿದ್ವಾಂಸರು, ಕುಶಾಗ್ರಮತಿಗಳು, ಆಲೋಚನಾಪರಶಕ್ತಿಯನ್ನು ಉಳ್ಳಂಥ ಸಾಹಿತಿ. ಇವರ ಸಂಪಾದನೆ ಹಾಗೂ ಅವರ ಕೃತಿಗಳ ಹಿನ್ನೆಲೆ ಗಮನಿಸಿದಾಗ ಅವರ ಪರಿಶ್ರಮದ ಬಗ್ಗೆ ನಮಗೆ ಕುತೂಹಲ ಮೂಡುತ್ತದೆ.

ತೀ.ನಂ.ಶ್ರೀಯವರು ಈ ಶತಮಾನದ ನಾಡುನುಡಿಗಾಗಿ ಸೇವೆಸಲ್ಲಿಸಿದ ಮಹನೀಯರಾಗಿದ್ದಾರೆ. ತೀ.ನಂ.ಶ್ರೀಯವರು ಬಹುಶ್ರುತರು. ''ಅವರೊಡನೆ ಸಂಭಾಷಿಸುತ್ತಿದ್ದರೆ ಅನೇಕ ಉದ್ಗ್ರಂಥಗಳ ಸಾರ ನಮಗೆ ಅನಾಯಾಸವಾಗಿ ದೊರೆಯುತ್ತಿತ್ತು'' ಎಂದು ಪು.ತಿ.ನರಸಿಂಹಾಚಾರ್ ಹೇಳುತ್ತಾರೆ. ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ ಸಂಸ್ಕೃತ, ಇಂಗ್ಲೀಷ್, ತೆಲುಗು ಇತ್ಯಾದಿ ಭಾಷೆಗಳಲ್ಲಿಯೂ ತೀ.ನಂ.ಶ್ರೀಯವರು ಪಾಂಡಿತ್ಯವನ್ನು ಗಳಿಸಿದ್ದರು ಎಂದು ಹೇಳಬಹುದಾಗಿದೆ.

ಹೆಚ್ಚಿನ ಅಧ್ಯಯನ ಪರಿಶ್ರಮದಲ್ಲಿ ತಮ್ಮ ಜೀವನವನ್ನು ಮುಡಿಪಾಗಿಟ್ಟವರು. ಇದರ ಫಲದಿಂದಲೇ ಸಂಶೋಧನಾ ಕ್ಷೇತ್ರದಲ್ಲಿ ಬಹುದೊಡ್ಡ ಹೆಸರು ಬರಲು ಕಾರಣವಾಗಿದೆ. ಉತ್ತಮ ಸಂಶೋಧಕರಲ್ಲಿ ತೀ.ನಂ.ಶ್ರೀಯವರು ಒಬ್ಬರಾಗಿದ್ದಾರೆ ಎಂದು ತಿಳಿಯಬಹುದಾಗಿದೆ.

ಬಿ.ಎಂ.ಶ್ರೀ. ಅವರಂತೆಯೇ ನಮ್ಮ ತೀ.ನಂ.ಶ್ರೀಯವರು ಸಾಹಿತ್ಯ ಕ್ಷೇತ್ರದಲ್ಲಿ ವ್ಯಾಪಕವಾದ ಸೇವೆಯನ್ನು ಸಲ್ಲಿಸಿದ್ದಾರೆ. ತೀ.ನಂ.ಶ್ರೀಯವರು ಕಾವ್ಯ, ಲಲಿತ ಪ್ರಬಂಧ, ಅನುವಾದ ಸಾಹಿತ್ಯ, ವಿಮರ್ಶೆ, ಸಂಶೋಧನೆ, ವ್ಯಾಕರಣ, ಗ್ರಂಥ ಸಂಪಾದನೆ ಹಾಗೂ ಭಾಷಾಶಾಸ್ತ್ರ ಎಂಬ ಸಾಹಿತ್ಯದ ಹತ್ತು ಹಲವು ಕ್ಷೇತ್ರಗಳಲ್ಲಿ ಸಾಧನೆಗೈದವರು. ೧೯೮೯ರಲ್ಲಿ ಅವರ 'ಭಾರತೀಯ ಕಾವ್ಯಮೀಮಾಂಸೆ' ಎಂಬ ಕೃತಿಗೆ ಮರಣೋತ್ತರ ಪಂಪ ಪ್ರಶಸ್ತಿ ಸಿಕ್ಕಿತು. ಇದನ್ನು 'ಆಚಾರ್ಯ ಕೃತಿ' ಎಂದು ರಾಷ್ಟ್ರ ಕವಿ ಕುವೆಂಪು ಅವರು ಹೇಳುತ್ತಾರೆ. ಪೌರ್ವಾತ್ಯ-ಪಾಶ್ಚಾತ್ಯ ಕಾವ್ಯ ಮೀಮಾಂಸೆಯ ಮತ್ತು ತತ್ವಶಾಸ್ತ್ರದ ಆಳವಾದ ಪರಿಚಯ ಅವರಿಗೆ ಇತ್ತು ಎಂಬುದಕ್ಕೆ 'ಭಾರತೀಯ ಕಾವ್ಯಮೀಮಾಂಸೆ' ಗಳಲ್ಲಿ ಕಂಡುಬರುವ ಮುಖ್ಯ ಅಂಶಗಳಾಗಿವೆ. ಕಾವ್ಯ ಸೂಕ್ಷ್ಮಗಳನ್ನು ಅರಿತುಕೊಳ್ಳುವಲ್ಲಿ ರಸಪ್ರಜ್ಞೆಯೂ ಅವರಲ್ಲಿತ್ತು. ತಮ್ಮ ಸಾಹಿತ್ಯದಲ್ಲಿನ ಸದೃಶ ನಿದರ್ಶನಗಳನ್ನು ಪ್ರಾಚೀನ ಸಾಹಿತ್ಯದಿಂದಂತೋ ಆಧುನಿಕ ಸಾಹಿತ್ಯದಿಂದಲೂ ಇತ್ತು. ಅತ್ಯಂತ ವ್ಯಾಪಕವಾದ ಓದು ತೀ.ನಂ.ಶ್ರೀಯವರಿಲ್ಲಿತ್ತು. ಭಾಷಿಕವಾದ ಪರಿಜ್ಞಾನ ಅತ್ಯಂತ ಆಳವಾಗಿತ್ತು ಎಂಬುದಕ್ಕೆ ಕೆಲವು ತೀ.ನಂ.ಶ್ರೀಯವರ ಭಾಷಾಶಾಸ್ತ್ರದ ಲೇಖನಗಳು ಮುಖ್ಯವಾಗುತ್ತದೆ. ವಿಷಯದ ಸ್ಪಷ್ಟವಾದ ಪರಿಕಲ್ಪನೆ ಮತ್ತು ಇತಿಹಾಸಿಕ ಸಂಪ್ರೇಕ್ಷಗಳು ಅವರಲ್ಲಿ ಮೇಳವಿಸಿದ್ದರಿಂದ ಚಿಂತನೆಯ ವಿಕಾಸವನ್ನು ಸಕ್ರಿಯವಾಗಿ ಮುಂದುವರಿಸಬಲ್ಲವರಾಗಿದ್ದರು. ಈ ಎಲ್ಲಾ ಕಾರಣಗಳಿಂದಲೇ ಅವರ ಭಾರತೀಯ ಕಾವ್ಯಮೀಮಾಂಸೆ ಒಂದು ಉತ್ತಮ ಕೃತಿಯಾಗಿದೆ.

ತೀ.ನಂ.ಶ್ರೀಯವರ ವಿದ್ವತ್ತು ಸಾಹಿತ್ಯದ ಅನೇಕ ಶಾಖೆಗಳನ್ನು ಆವರಿಸಿಕೊಂಡಿತ್ತು ಎಂಬುದಕ್ಕೆ ಮುಖ್ಯವಾಗಿ ತೀ.ನಂ.ಶ್ರೀಯವರು ಕನ್ನಡದ ಪ್ರಾಚೀನ ಸಾಹಿತ್ಯ ಗ್ರಂಥಗಳು, ಆಧುನಿಕ ಸಾಹಿತ್ಯ ಪ್ರಕಾರಗಳು, ಅಲಂಕಾರಶಾಸ್ತ್ರ, ಛಂದಸ್ಸು, ವ್ಯಾಕರಣ, ಗ್ರಂಥಸಂಪಾದನೆ, ಭಾಷಾಶಾಸ್ತ್ರ, ಆಧುನಿಕ ಸಂಶೋಧನಾ ಮಾರ್ಗ ಇವೆಲ್ಲ ಕ್ಷೇತ್ರಗಳಲ್ಲಿ ಅಧಿಕಾರವಾಣಿಯಿಂದ ಮಾತನಾಡಬಲ್ಲ ವಿದ್ವಾಂಸರಾಗಿದ್ದರು. ಇದರ ಜೊತೆಗೆ ಇಂಗ್ಲೀಷ್, ಸಂಸ್ಕೃತ ಭಾಷೆಗಳಲ್ಲಿ ಗಾಢವಾದ ಪಾಂಡಿತ್ಯವೂ ಅವರಲ್ಲಿತ್ತು.

ತೀ.ನಂ.ಶ್ರೀಯವರು ಮೂಲತಃ ಭಾಷಾಪ್ರೇಮಿಗಳಾಗಿದ್ದರು ಎಂಬುದಕ್ಕೆ ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸಿರುವ ಕನ್ನಡ ನಿಘಂಟಿನ ವಿಚಾರದಲ್ಲಿ ತೀ.ನಂ.ಶ್ರೀಯವರ ಪಾತ್ರ ಬಹುಪ್ರಧಾನವಾದುದು. ನಿಘಂಟಿಗೆ ಒಂದು ಹೊಸ ಆಕಾರವನ್ನು ಕೊಟ್ಟವರು. ತೀ.ನಂ.ಶ್ರೀಯವರು ಅವರು ಬರೆದಿರುವುದು ಕಡಿಮೆ. ಆದರೆ ಆ ಸಾಹಿತ್ಯವೇ ಕನ್ನಡ

ಚರಿತ್ರೆಯಲ್ಲಿ ಅಮೂಲ್ಯವಾದ ಗ್ರಂಥಗಳಾಗಿವೆ. "ತೀ.ನಂ.ಶ್ರೀಯವರು ಉತ್ತಮ ಭಾಷಣಕಾರರಾಗಿದ್ದರು. ಯಾವುದೊಂದು ವಿಚಾರವನ್ನು ಸ್ಪಷ್ಟವಾಗಿ ತಿಳಿಸುತ್ತಿದ್ದವರು. ತೀ.ನಂ.ಶ್ರೀಯವರು ಉತ್ತಮ ಭಾಷಣತಜ್ಞರಾಗಿದ್ದರು. ಈ ಮಾತನ್ನು ಪ್ರೊ. ಜಿ. ವೆಂಕಟಸುಬ್ಬಯ್ಯ ಅವರು ತಿಳಿಸುತ್ತಾರೆ."[1]

ಇದರಿಂದಲೇನೋ ತೀ.ನಂ.ಶ್ರೀಯವರು ಅಧ್ಯಾಪಕ ವೃತ್ತಿಯನ್ನು ಆರಿಸಿಕೊಂಡು ಅದರಲ್ಲಿ ಮುಂದುವರಿಯಲು ಅಪೇಕ್ಷಿಸಿದರು. ತುಮಕೂರು, ಮೈಸೂರುಗಳಲ್ಲಿ ವಿದ್ಯಾಭ್ಯಾಸ ಮಾಡಿ ಸಿಕ್ಕಿದ ಅಮಲ್ದಾರ್‌ಗಿರಿಯನ್ನು ಉಪಾಧ್ಯಾಯ ಜೀವನಕ್ಕಾಗಿ ಬಿಟ್ಟುಕೊಟ್ಟು ಮೂವತ್ತು ಮೂರು ವರ್ಷಗಳವರೆಗೆ ಈ ವೃತ್ತಿಯಲ್ಲಿ ಮುಂದುವರಿದರು ಎಂದು ಹೇಳಬಹುದಾಗಿದೆ. ಅವರ 'ಭಾರತೀಯ ಕಾವ್ಯಮೀಮಾಂಸೆ' ಯಂಥ ಕೃತಿ ಕನ್ನಡದಲ್ಲಿ ಇನ್ನೊಂದಿಲ್ಲ. ಸಂಸ್ಕೃತ ಲಾಕ್ಷಣಿಕರನ್ನು ಆಳವಾಗಿ ಅಧ್ಯಯನ ಮಾಡಿ ಅವರ ಚಿಂತನೆಗಳನ್ನು ಕನ್ನಡ ಸಾಹಿತ್ಯಲೋಕಕ್ಕೆ ಪಸರಿಸಿದವರು ತೀ.ನಂ.ಶ್ರೀಯವರು ಎಂದು ಹೇಳಬಹುದಾಗಿದೆ. ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ ಕೆಲವು ಉತ್ತಮ ಲೇಖನಗಳನ್ನು ಪ್ರಸಿದ್ಧ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ತೀ.ನಂ. ಶ್ರೀಯವರು ಕನ್ನಡ ನಿಘಂಟುಗಳ ಪರಿಷ್ಕರಣದಲ್ಲಿ ಅದನ್ನು ಅಚ್ಚುಕಟ್ಟಾಗಿ ನಿರೂಪಿಸುವಲ್ಲಿ ತೀ.ನಂ.ಶ್ರೀಯವರು ಪ್ರಮುಖ ವ್ಯಕ್ತಿತ್ವವುಳ್ಳವರಾಗಿದ್ದಾರೆ.

ತೀ.ನಂ.ಶ್ರೀಯವರ ವಿದ್ವತ್ತು, ಬಹುಶಃ ತತ್ವಗಳನ್ನು ಬಲ್ಲವರೆಲ್ಲರೂ ಅವರು ಹೆಚ್ಚು ಬರೆಯದೆ ಇದ್ದುದಕ್ಕೆ ವಿಷಾದಿಸುವವರೇ. "ಆಗಿನ ಅಧ್ಯಾಪಕರಲ್ಲಿ ಬಹು ಜನರ ಪ್ರತಿಭೆ ಬರವಣಿಗೆಯಲ್ಲಿ ಹೊರಹೊಮ್ಮದೇ ಇದ್ದುದಕ್ಕೆ ಧೈರ್ಯ ಅಥವಾ ಆತ್ಮವಿಶ್ವಾಸದ ಅಭಾವ ಕಾರಣವಿರಬಹುದೇ"[2] ಎಂದು ಪ್ರೊ. ಎ.ಎನ್. ಮೂರ್ತಿರಾಯರು ಹೇಳುತ್ತಾರೆ. ತೀ.ನಂ.ಶ್ರೀಯವರಲ್ಲಿ ನಾವು ಮುಖ್ಯವಾಗಿ ಕಾಣುವ ಗುಣವೆಂದರೆ ಶ್ರದ್ಧೆ, ಆತ್ಮವಿಶ್ವಾಸ ಅವರ ಬರವಣಿಗೆಯ ರೀತಿ, ಅವರ ಪಾಂಡಿತ್ಯದ ಅನುಭವ, ಅಧ್ಯಾಪಕ ವೃತ್ತಿಯಲ್ಲಿನ ಅವರ ಮನಸ್ಸು ಇವೆಲ್ಲವನ್ನು ಗಮನಿಸಿದರೆ ತೀ.ನಂ.ಶ್ರೀಯವರು ಉತ್ತಮ ಮನೆತನದಿಂದ ಬಂದವರು ಎಂದು ಗೊತ್ತಾಗುತ್ತದೆ.

ತೀ.ನಂ.ಶ್ರೀಯವರು ಎಲ್ಲಿ ಹೋಗಿ ಮಾತನಾಡಬೇಕಾದರೂ ಅಂದರೆ ಅದರಲ್ಲಿ ಮುಖ್ಯವಾಗಿ ತರಗತಿಗಳಲ್ಲಿ, ಸಾರ್ವಜನಿಕ ಸ್ಥಳಗಳಲ್ಲಿ ಭಾಷಣ ಮಾಡಬೇಕಾದರೆ ಪೂರ್ವಸಿದ್ಧತೆಯಿಲ್ಲದೆ ಹೋಗುತ್ತಿರಲಿಲ್ಲ ಎಂಬುದಾಗಿ ಒಂದು ವೇಳೆ ತಯಾರಾಗದೆ ಹೋದರೆ ಅವರ ಪ್ರಕಾರ ಶ್ರೋತೃಗಳಿಗೆ ಮಾಡಿದ ಅವಮಾನ ಎಂಬ ನಿಷ್ಠುರತೆ

ಅವರದು ಎಂದು ಪ್ರೊ. ಎಸ್.ಜಿ. ಸಣ್ಣಗುಡ್ಡಯ್ಯನವರು ಅಭಿಪ್ರಾಯ ಪಡುತ್ತಾರೆ. ಏಕೆಂದರೆ ಸಣ್ಣಗುಡ್ಡಯ್ಯನವರು ತೀ.ನಂ.ಶ್ರೀಯವರ ಶಿಷ್ಯರಲ್ಲಿ ಒಬ್ಬರಾಗಿದ್ದರು ಎಂದು ಹೇಳಬಹುದಾಗಿದೆ.

ಅಧ್ಯಾಪಕ ವೃತ್ತಿಯಲ್ಲಿ ಅವರಿಗಿದ್ದ ಗೌರವ ಹಾಗೂ ವಿಶ್ವಾಸ ಬಹಳ ಶೋಭಿತವಾಗಿತ್ತು. ಕನ್ನಡ ಗ್ರಂಥ ಸಂಪಾದನ ಶಾಸ್ತ್ರವನ್ನು ಕುರಿತು ತೀ.ನಂ.ಶ್ರೀಯವರಿಗಿದ್ದ ಅಭಿಪ್ರಾಯ ಬಹಳ ಮುಖ್ಯವಾದುದ್ದಾಗಿತ್ತು. ಗ್ರಂಥ ಸಂಪಾದನಾ ಶಾಸ್ತ್ರವನ್ನು ಒಂದು ಅಧ್ಯಯನ ಶಿಸ್ತು ಎಂದು ಮೊದಲಿಗೆ ಪರಿಗಣಿಸಿದವರು ತೀ.ನಂ.ಶ್ರೀಯವರು ಆಗಿದ್ದಾರೆ. ತೀ.ನಂ.ಶ್ರೀಯವರು ಬರೆದದ್ದು ಕಡಿಮೆ ಅದಕ್ಕೆ ಅನುಗುಣವಾಗಿ ಒಂದು ಗಾದೆ ಮಾತನ್ನು ಹೇಳುತ್ತಿದ್ದರು. ಅತೀನೆಂಟರೇ ಓದು ಬರಹಕ್ಕೆ ಶತ್ರು.' ಹೇಳುತ್ತಿದ್ದರಂತೆ ಇದಕ್ಕೆ ಪ್ರತ್ಯುತ್ತರವಾಗಿ ತೀ.ನಂ.ಶ್ರೀ.ಯವರ ಸಮಕಾಲೀನರಾದ ಪು.ತಿ.ನ. ಅವರು. ತೀ.ನಂ.ಶ್ರೀಯವರ ಗಾದೆ ಮಾತಿಗೆ ಅನುಗುಣವಾಗಿ ಈ ರೀತಿ ಹೇಳುತ್ತಿದ್ದರಂತೆ. ಅದೇನೆಂದರೆ 'ಮಾತು ಬರಹಕ್ಕೆ ಶತ್ರು' ಎಂದು. ಅಂದರೆ ತೀ.ನಂ.ಶ್ರೀಯವರು ಉತ್ತಮ ಭಾಷಣಕಾರರಾಗಿದ್ದು ಆ ಭಾಷಣ ಕಲೆಯನ್ನು ಲೇಖನದ ಮೂಲಕ ಮಂಡಿಸಲಿಲ್ಲ. ಈ ರೀತಿಯ ಒಂದು ಸಮಸ್ಯೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮುಖ್ಯವಾದ ಒಂದು ಸಂಗತಿಯಾಗಿದೆ.

ತೀ.ನಂ.ಶ್ರೀ.ಯವರು ಬರೆದ ಗ್ರಂಥಗಳ ಸಂಖ್ಯೆ ಕಡಿಮೆ ಎಂದೇ ಎಲ್ಲರ ಅಭಿಪ್ರಾಯ. ಅವರ ಹೆಸರಿನಲ್ಲಿ ಪ್ರಕಟವಾಗಿರುವ ಕೃತಿಗಳ ಸಂಖ್ಯೆ ಕೇವಲ ಹದಿನಾಲ್ಕು ಮಾತ್ರ. ಅವುಗಳಲ್ಲಿ ಮೂರು ಅವರ ಮರಣಾನಂತರ ಪ್ರಕಟವಾದವು. ಇದರ ಜೊತೆಗೆ ಅಲ್ಲಲ್ಲಿ ಚದುರಿಹೋದ ಕೆಲವು ಬಿಡಿ ಲೇಖನಗಳು ಕೆಲವು ಶಾಸ್ತ್ರ ಗ್ರಂಥಗಳು ಒಟ್ಟಾರೆ ಹೇಳಬೇಕೆಂದರೆ ತೀ.ನಂ.ಶ್ರೀಯವರ ಸಾಹಿತ್ಯವು ಬಹಳ ಅಲ್ಪಮಟ್ಟವು, ಜೊತೆಗೆ ಪರಿಪೂರ್ಣತೆಯನ್ನು ಇವರ ಗ್ರಂಥಗಳಲ್ಲಿ ಕಾಣಬಹುದಾಗಿದೆ.

''ತೀ.ನಂ.ಶ್ರೀಯವರು ಮಿತಭಾಷಿಗಳು, ಶಬ್ಧಗಳನ್ನು ತೂಕಮಾಡಿ ಮಾತನಾಡುತ್ತಿದ್ದರು ಎಂದು ಕೋಪ ಉದ್ವೇಗಗಳಿಗೆ ಒಳಗಾಗುತ್ತಿರಲಿಲ್ಲ''ವೆಂದು ಎಂ. ಮರಿಯಪ್ಪಭಟ್ಟರ ಅಭಿಪ್ರಾಯವಾಗಿದೆ. ಇದರ ಜೊತೆಗೆ ಸುಮ್ಮ ಸುಮ್ಮನೆ ಉದ್ದುದ್ದವಾಗಿ ಯಾರನ್ನು ಹೊಗಳುವವರಲ್ಲ. ಹಾಗೆಯೇ ಯಾರನ್ನು ತೆಗಳುವವರೂ ಅಲ್ಲ. ಯಾವ ವಿಷಯದ ಮೇಲೂ ಸ್ವಾರಸ್ಯಕರವಾಗಿ ಭಾಷಣ ಮಾಡುವಂತಹ ಚತುರರಾಗಿದ್ದರು. ಉತ್ತಮ ಭಾಷಣಕಲಾ ಪ್ರವೃತ್ತಿಯುಳ್ಳವರಾಗಿದ್ದರು.

ಕನ್ನಡ, ಸಂಸ್ಕೃತ, ಇಂಗ್ಲೀಷ್ ಭಾಷೆಗಳಲ್ಲಿ ವಿಶಿಷ್ಟವಾದ ಪ್ರಭುತ್ವವಿದ್ದ ಈ ಪ್ರತಿಭಾವಂತ ವಿದ್ವಾಂಸರು ಸಾಹಿತ್ಯ ಲೋಕದಲ್ಲಿ ವಿದ್ವತ್ ಪ್ರಪಂಚದಲ್ಲಿ ಅವರು ನೀಡಿರುವ ಕೊಡುಗೆಗಳು ಅಮರವಾದುದು. ಹಾಗೂ ಮುಖ್ಯವಾದುದಾಗಿದೆ. ಕನ್ನಡ ನಿಘಂಟಿನ ಸಂಪಾದಕ ಮಂಡಲಿಯ ಗೌರವ ಅಧ್ಯಕ್ಷರಾಗಿದ್ದ ತೀ.ನಂ.ಶ್ರೀಯವರು ಯಾವುದಾದರೂ ಶಬ್ಧ ನಿಷ್ಪತ್ತಿಯ ವಿಚಾರವಾಗಿ ಸಮಾಲೋಚನೆ ಮಾಡುವಾಗ ಹಲವಾರು ಭಾಷೆಗಳನ್ನು ಕುರಿತು ಹೋಲಿಕೆ ನೀಡುತ್ತಿದ್ದರು. ಇದರ ಜೊತೆಗೆ ಉತ್ತಮ ಪರಿಶ್ರಮವುಳ್ಳವರಾಗಿದ್ದರು. ತೀ.ನಂ.ಶ್ರೀಯವರು ಮನೆಯಲ್ಲೇ ಒಂದು ಚಿಕ್ಕದಾದ ಹಾಗೂ ಚೊಕ್ಕವಾದ ಒಂದು ಗ್ರಂಥಾಲಯವನ್ನು ನಿರ್ಮಿಸಿಕೊಂಡಿದ್ದರಂತೆ. ಹಲವಾರು ವಿಚಾರಗಳನ್ನು ಕುರಿತು ದೀರ್ಘವಾದ ಸಮಾಲೋಚನೆ ನಡೆಸಿ ಉತ್ತಮ ತೀರ್ಮಾನಕ್ಕೆ ಬರುತ್ತಿದ್ದರಂತೆ. ತೀ.ನಂ.ಶ್ರೀಯವರ ಪಾಂಡಿತ್ಯವು ಕೇವಲ ಸುಳ್ಳಲ್ಲ. ಅದು ರಸಪೂರ್ಣವಾದ ಪಾಂಡಿತ್ಯದ ಜೊತೆಗೆ ಪರಿಪಕ್ವವಾದ ಜ್ಞಾನ ತೀ.ನಂ.ಶ್ರೀಯವರು ಹಿರಿಯ ಸಾಹಿತಿಗಳಲ್ಲಿ ಒಬ್ಬರಾಗಿ, ಉನ್ನತಮಟ್ಟ ವಿಮರ್ಶಕರಾಗಿ ಉತ್ತಮ ಸ್ನೇಹಿತ ವರ್ಗದವರನ್ನು ಹೊಂದಿದವರಾಗಿದ್ದು, ಉತ್ತಮ ಗುರುಗಳ ಮಾರ್ಗದರ್ಶನದಲ್ಲಿ ನಡೆದ ತೀ.ನಂ. ಶ್ರೀಯವರು ಉತ್ತಮ ಪ್ರಾಧ್ಯಾಪಕರಾಗಿ ಮುಂದುವರಿದರು. ಹಾಗೂ ಉತ್ತಮ ಭಾಷಾ ಕಲೆಯನ್ನು ಹೊಂದಿದ್ದರು. ಇದರ ಜೊತೆಗೆ ಅಧ್ಯಾಪಕ ವೃತ್ತಿಯಲ್ಲಿ ಇವರು ಗೌರವ, ಆಸಕ್ತಿ, ಅಭಿಮಾನಗಳು ಬಹಳ ಮುಖ್ಯವಾದವು ಎಂದು ಹೇಳಬಹುದು.

## 2. ತೀ.ನಂ.ಶ್ರೀಯವರ ಸಾಧನೆಗಳು

ತೀ.ನಂ.ಶ್ರೀಯವರ ಜೀವನ ಒಂದು ಆದರ್ಶ ಜೀವನ. ಅದು ಮುಂದುವರಿದ ರೀತಿ ಬಹಳ ಕುತೂಹಲಕಾರಿಯಾದುದು ತೀ.ನಂ.ಶ್ರೀಯವರು ತಮ್ಮ ವಿದ್ಯಾರ್ಥಿ ಜೀವನದಿಂದ ಪ್ರಾರಂಭಿಸಿ ತಮ್ಮ ಜೀವನದ ಅಂತ್ಯದವರೆಗೂ ಮಾಡಿದ ಕೆಲವು ಸಾಧನೆಗಳನ್ನು ಈ ಭಾಗದಲ್ಲಿ ತಿಳಿಸಲಾಗಿದೆ.

ತೀ.ನಂ.ಶ್ರೀಯವರ ವಿದ್ಯಾರ್ಥಿಜೀವನದ ಪ್ರತಿಭೆ. ಅವರ ಜೀವನ ಕೆಲವು ತ್ಯಾಗ ಹಾಗೂ ಸಾಧನೆಗಳು ಮತ್ತು ಕನ್ನಡ ಸಾಹಿತ್ಯ, ಶಾಸ್ತ್ರಗಳು ಮತ್ತು ಭಾಷಾ ವಿಜ್ಞಾನಕ್ಕೆ ಅವರು ತೆತ್ತ ಸಾಧನೆ ಬಹಳ ಮುಖ್ಯವಾದವು. ತೀ.ನಂ.ಶ್ರೀಯವರ ಊರು ತೀರ್ಥಪುರ. ಈ ಗ್ರಾಮ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿರುವ ಒಂದು ಕುಗ್ರಾಮ. ತೀ.ನಂ.ಶ್ರೀಯವರ ಪ್ರಾಥಮಿಕ ಶಾಲೆಯ ಅಭ್ಯಾಸ ಹಳ್ಳಿಯಲ್ಲಿಯೇ

ಈಗಲೂ ಇರುವ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ನಡೆಯಿತು. ಅನಂತರ ಮಾಧ್ಯಮಿಕ ಶಾಲೆಯ ವಿದ್ಯಾಭ್ಯಾಸ ತುಮಕೂರಿನ ಸರ್ಕಾರಿ ಕೊಲೇಜಿಯಟ್ ಸ್ಕೂಲ್‌ಗೆ ತೆರಳಿದರು. ಮೈಸೂರು ಮಹಾರಾಜ ಕಾಲೇಜಿನಲ್ಲಿ ಬಿ.ಎ. ವ್ಯಾಸಂಗ ಹಾಗೂ ಎಂ.ಎ. ವ್ಯಾಸಂಗ ಮುಗಿಸಿದ್ದರು.

ತೀ.ನಂ.ಶ್ರೀಯವರು ವಿದ್ಯಾರ್ಥಿದೆಸೆಯಲ್ಲಿದ್ದಾಗಲೇ ಸಾಹಿತ್ಯದ ಮೇಲೆ ಅಭಿರುಚಿ ಇತ್ತು ಎಂಬುದಕ್ಕೆ ಪ್ರೌಢಶಾಲೆಯಲ್ಲಿ ಇದ್ದಾಗಲೇ ಕೆಲವು ಕವಿತೆಗಳನ್ನು ಬರೆದು ಅದನ್ನು 'ಸ್ಕೂಲ್ ಪೋಕ್' ಎಂಬ ಪತ್ರಿಕೆಯಲ್ಲಿ ಪ್ರಕಟಿಸಿದರು. ತೀ.ನಂ.ಶ್ರೀಯವರು ವಿದ್ಯಾರ್ಥಿಯಾಗಿ ಇರುವಾಗಲೇ ಕನ್ನಡ ಭಾಷೆ, ಸಾಹಿತ್ಯದ ಮೇಲೆ ಅಪಾರ ಜ್ಞಾನವಿತ್ತು ಎಂಬುದಕ್ಕೆ ಈ ಮೇಲಿನ ಪುಸ್ತಕ ಕಾರಣವಾಗಿದೆ. ಮೈಸೂರು ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷ್ ಎಂ.ಎ. ಪದವಿಯಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದರೂ. ಅದೇ ರೀತಿ ಕನ್ನಡ ಎಂ.ಎ. ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಪ್ರಥಮ ಸ್ಥಾನ ದೊರಕಿ ಮೂರು ಸುವರ್ಣ ಪದಕಗಳು ತೀ.ನಂ.ಶ್ರೀಯವರ ಪಾಲಾದವು.

ತೀ.ನಂ.ಶ್ರೀಯವರಿಗೆ ಉತ್ತಮ ಸಹಪಾಠಿಗಳಿದ್ದು ಮುಖ್ಯವಾಗಿ ಅವರಲ್ಲಿ ಪ್ರೊ. ಡಿ.ಎಲ್. ನರಸಿಂಹಚಾರ್ಯ, ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಪ್ರೊ.ಪು.ತಿ.ನರಸಿಂಹಚಾರ್, ಶ್ರೀ ಕೂಡಲಿ ಚಿದಂಬರಂ ಪ್ರೊ. ನಾ. ಶಿವರಾಮಶಾಸ್ತ್ರಿ ಅವರ ಸಹಪಾಠಿಗಳಾಗಿದ್ದು ಮುಂದೆಯೂ ಅವರ ಪ್ರಿಯ ಸ್ನೇಹಿತರುಗಳಾಗಿದ್ದರು. ಅದೇ ರೀತಿ ತೀ.ನಂ.ಶ್ರೀಯವರು ಎಂ.ಎ. ಮಾಡುತ್ತಿದ್ದ ಸಮಯದಲ್ಲಿ ಅಲ್ಲಿ ಒಬ್ಬರೂ ಉತ್ತಮ ಸ್ನೇಹಿತರು ಪರಿಚಿತರಾದರು ಅವರ ಹೆಸರೇ ಜಿ.ಪಿ.ರಾಜರತ್ನಂ.

ತೀ.ನಂ.ಶ್ರೀಯವರಿಗೆ ೧೯೨೮ನೆಯ ಇಸವಿಯಲ್ಲಿ ಸಿವಿಲ್ ಪರೀಕ್ಷೆಯಲ್ಲಿ ಮೂರನೇ ಸ್ಥಾನ ಬಂದಿತು. ಮೊದಲು ಎರಡು ಸ್ಥಾನ ಪಡೆದವರನ್ನು ನೇರವಾಗಿ ಪ್ರೊಬೆಶನರಿ ಆಸಿಸ್ಟೆಂಟ್ ಕಮೀಷನರ್ ಎಂದು ನೇಮಿಸಿಕೊಳ್ಳಲಾಯಿತು. ತೀ.ನಂ.ಶ್ರೀಯವರಿಂದ ವಿದ್ವತ್ ಮತ್ತು ಶಿಕ್ಷಣ ಕ್ಷೇತ್ರಕ್ಕೆ ಆದ ಅಪಾರ ಲಾಭವನ್ನು ಈಗಲೂ ಎಲ್ಲರೂ ಸಂತೋಷದಿಂದ ನೆನೆಯುತ್ತಾರೆ. ಕನ್ನಡ ಎಂ.ಎ. ಪಡೆದ ತೀ.ನಂ.ಶ್ರೀಯವರನ್ನು ಕನ್ನಡ ಅಧ್ಯಾಪಕರಾಗಿ ನೇಮಿಸಿಕೊಂಡರು. ''ಶ್ರೀ ಆಚಾರ್ಯ ಬಿ.ಎಂ.ಶ್ರೀಯವರ ಉತ್ತೇಜನದಿಂದ ಮತ್ತು ತಮ್ಮ ಸ್ವಂತ ಒಲವಿನಿಂದ ತೀ.ನಂ.ಶ್ರೀಯವರು ಆಗಿನ ಕಾಲದ ಬಹುಗೌರವಯುತ ಮತ್ತು ಅಧಿಕಾರಯುತವಾದ

ಹುದ್ದೆಯನ್ನು ತ್ಯಜಿಸಿ ಮೈಸೂರಿನಲ್ಲಿ ಕನ್ನಡ ಅಧ್ಯಾಪಕ ಹುದ್ದೆಯನ್ನು ಸ್ವೀಕರಿಸಿ ಬಂದರು.''[೫] ತೀ.ನಂ.ಶ್ರೀಯವರು ೧೯೩೦ರ ದಶಕದಲ್ಲಿ ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾಗ ಅಂದಿನ ಯುವರಾಜರಾಗಿದ್ದ ''ಶ್ರೀ ಜಯಚಾಮರಾಜ ಒಡೆಯರ್'' ಅವರು ತೀ.ನಂ.ಶ್ರೀಯವರ ಶಿಷ್ಯರಾಗಿದ್ದರು. ತೀ.ನಂ.ಶ್ರೀ ಜ್ಞಾನ ತುಂಬ ವಿಶಿಷ್ಟವಾದುದು. ಸಾಹಿತ್ಯ ಅಭಿರುಚಿಯಲ್ಲಿ ತೀ.ನಂ.ಶ್ರೀಯವರಿಗೆ ಬಹಳ ಆಸಕ್ತಿ ಇತ್ತು ಎಂದು ಹೇಳಬಹುದು.

ತೀ.ನಂ.ಶ್ರೀಯವರು ಉತ್ತಮ ಪ್ರಾಧ್ಯಾಪಕರಾಗಿದ್ದರು. ೧೯೫೨ನೆಯ ಇಸವಿಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಾಪಕ ಹುದ್ದೆಯನ್ನು ವಹಿಸಿಕೊಂಡರು. ಇದಕ್ಕೂ ಮುಂಚೆ ತೀ.ನಂ.ಶ್ರೀಯವರು ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದುಕೊಂಡು ತದನಂತರ ಧಾರವಾಡ ವಿಶ್ವವಿದ್ಯಾಲಯಕ್ಕೆ ಹೋದರು. ಆದರೂ ಮೈಸೂರಿನಲ್ಲಿ ಇವರ ಅಭಿಮಾನಿಗಳು ಹೇರಳವಾಗಿದ್ದರೂ ಎಂದು ಹೇಳಬಹುದು. ತೀ.ನಂ.ಶ್ರೀಯವರು ಧಾರವಾಡ ವಿಶ್ವವಿದ್ಯಾಲಯಕ್ಕೆ ಹೋದ ನಂತರ ಅಲ್ಲಿ ಸಾಹಿತ್ಯ ಬೆಳವಣಿಗೆಯಲ್ಲಿ ಕೆಲವು ಮಾರ್ಪಾಡುಗಳು ಉಂಟಾಯಿತು. ಅದರಲ್ಲಿ ಮುಖ್ಯವಾಗಿ ಭಾಷಾ ಶಾಸ್ತ್ರದ ಬಗ್ಗೆ ಹತ್ತುಹಲವು ರೀತಿಯ ವ್ಯಾಪಕ ಅಧ್ಯಯನವನ್ನು ಮುಂದುವರಿಸಿದರು. ಅನೇಕ ಹೊಸ ವಿಚಾರಗಳನ್ನು ಬೆಳಕಿಗೆ ತಂದರು.

ತೀ.ನಂ.ಶ್ರೀಯವರು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಐದು ವರ್ಷ ಕನ್ನಡ ಪ್ರಾಧ್ಯಾಪಕರಾಗಿದ್ದು ಆ ಸಮಯದಲ್ಲಿ ಕನ್ನಡ ಭಾಷೆ ಮತ್ತು ಭಾಷಾಶಾಸ್ತ್ರಗಳಿಗೆ ಸಂಬಂಧಪಟ್ಟಂತೆ ದೇಶ ವಿದೇಶಗಳಲಿ ಇವರ ಖ್ಯಾತಿ ಹರಡಿತು. ಭಾಷಾಶಾಸ್ತ್ರದ ಜೊತೆಗೆ ಕನ್ನಡ ಸಾಹಿತ್ಯದ ಇತಿಹಾಸದ ಬಗ್ಗೆ ಒಂದು ಬೃಹತ್ ಯೋಜನೆ ನಡೆಸುತ್ತಿದ್ದರು. ಕನ್ನಡ ಸಾಹಿತ್ಯ ಮತ್ತು ವಿದ್ವತ್ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ ಮೂರು ನಾಲ್ಕು ಕನ್ನಡಿಗರು ಮಾತ್ರ ಆ ವೇಳೆಗೆ ವಿದೇಶಕ್ಕೆ ಹೋಗಿ ಬಂದಿದ್ದರು. ಅವರಲ್ಲಿ ತೀ.ನಂ.ಶ್ರೀಯವರು ಒಬ್ಬರಾಗಿದ್ದಾರೆ. ಈ ರೀತಿಯಾಗಿ ತೀ.ನಂ.ಶ್ರೀಯವರಿಗೆ ಬಂದ ವಿದೇಶಿ ಆಹ್ವಾನ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಸಂದ ಮೊದಲ ಗೌರವವಾಗಿದೆ. ಅದು ಅಲ್ಲದೆ ಕನ್ನಡ ನಿಘಂಟು ಕ್ಷೇತ್ರದಲ್ಲಿ ಅವರ ಸಾಧನೆ ಬಹಳ ಅತ್ಯುತ್ತಮವಾದುದು. ೧೯೫೭ರಲ್ಲಿ ತೀ.ನಂ.ಶ್ರೀಯವರು ಯು.ಜಿ.ಸಿ. ಪ್ರಾಧ್ಯಾಪಕರಾಗಿ ನೇಮಕವಾದರು. ೧೯೬೦ರಲ್ಲಿ ಕನ್ನಡ ಸ್ನಾತಕೋತ್ತರ ಬೋಧನೆ ಮತ್ತು ಸಂಶೋಧನೆ ವಿಭಾಗದ

ಮುಖ್ಯಸ್ಥರಾಗಿ ಮಾನಸಗಂಗೋತ್ರಿಗೆ ತೆರಳಿದರು. ೧೯೬೨ರಲ್ಲಿ ಸೇವೆಯಿಂದ ನಿವೃತ್ತರಾದರು. ಅನಂತರ ನಿಧನದವರೆಗೂ ಯು.ಜಿ.ಸಿ. ಸಂದರ್ಶಕ ಪ್ರಾಧ್ಯಾಪಕರಾಗಿ ಮಾನಸ ಗಂಗೋತ್ರಿಯೊಡನೆ ತಮ್ಮ ಸಂಪರ್ಕವನ್ನು ಇಟ್ಟುಕೊಂಡಿದ್ದರು ಮತ್ತು ಕೆಲವು ಸ್ನಾತಕೋತ್ತರ ಭಾಷಣಗಳನ್ನು ಮಾಡುತ್ತಿದ್ದರು. ಇದರೊಡನೆ ಸಂಶೋಧನಾ ಕಾರ್ಯವನ್ನು ಮುಂದುವರಿಸಿ ಪುಣೆಯ ಡೆಕ್ಕನ್ ಕಾಲೇಜಿನ ಸಂಪರ್ಕದಲ್ಲಿದ್ದರು ಎಂದು ಹೇಳಬಹುದಾಗಿದೆ.

೧೯೫೮ರಲ್ಲಿ ತೀ.ನಂ.ಶ್ರೀಯವರು 'ಕನ್ನಡ ಸಾಹಿತ್ಯ ಪರಿಷತ್ತು' ಕೈಗೊಂಡಿದ್ದ ಕನ್ನಡ ನಿಘಂಟುವಿನ ಸಂಪಾದಕ ಸಮಿತಿಯ ಅಧ್ಯಕ್ಷರಾದರು. ನಿವೃತ್ತರಾದ ನಂತರವೂ ಇದರ ಅಧ್ಯಕ್ಷರಾಗಿ ಮುಂದುವರಿದರು. ಇದು ತೀ.ನಂ.ಶ್ರೀಯವರಿಗೆ ಗೌರವ ತಂದುಕೊಡುವ ಒಂದು ಕೆಲಸವಾಗಿತ್ತು. ಅದೇ ರೀತಿ ತೀ.ನಂ.ಶ್ರೀಯವರು ಉತ್ತಮ ಭಾಷಾಜ್ಞಾನರೂ ಆಗಿದ್ದರು. ಇದರಿಂದಲೇ ದೆಹಲಿ ವಿಶ್ವವಿದ್ಯಾಲಯ ತೀ.ನಂ.ಶ್ರೀಯವರ ಭಾಷಾ ಪ್ರತಿಮೆಯನ್ನು ಗಮನಿಸಿ ಭಾಷ ಪ್ರೌಢಿಮೆಯನ್ನು ಗಮನಿಸಿ ಭಾಷಾ ಪ್ರಾಧ್ಯಾಪಕ ವೃತ್ತಿಗೆ ಆಹ್ವಾನಿಸಿತು. ದೆಹಲಿ ವಿಶ್ವವಿದ್ಯಾಲಯದ ಭಾಷಾಶಾಸ್ತ್ರದ ವಿಭಾಗದ ಪ್ರಥಮ ಪ್ರಾಧ್ಯಾಪಕ ಹುದ್ದೆಗೆ ನೇಮಕಗೊಂಡ ಗೌರವ ತೀ.ನಂ.ಶ್ರೀಯವರಿಗೆ ಸಲ್ಲುತ್ತದೆ.

ತೀ.ನಂ.ಶ್ರೀಯವರು ಉತ್ತಮ ಭಾಷಾ ಪಂಡಿತರಾಗಿದ್ದರಿಂದ 'ಕನ್ನಡ ಭಾಷಾ ಚರಿತ್ರೆ'ಯ ಗ್ರಂಥವನ್ನು ಬರೆಯಬೇಕೆನ್ನುವ ವಿಚಾರ ಅವರ ಭಾಷಾ ಶಾಸ್ತ್ರದ ಜ್ಞಾನದ ಮೇಲೆ ಅವಲಂಬಿತವಾಗಿತ್ತು. ಇದಕ್ಕಾಗಿ ತುಂಬಾ ವ್ಯಾಸಂಗ, ಸಂಶೋಧನೆ, ಭಾಷೆಯ ಸಂಗ್ರಹಣೆಯ ವಿಧಾನದಲ್ಲಿ ತೊಡಗಿದರು. ಇದಕ್ಕಾಗಿಯೇ ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಭಾಷಾಶಾಸ್ತ್ರದ ಸಂದರ್ಶಕ ಪ್ರಾಧ್ಯಾಪಕರಾಗಿ ಮುಂದುವರಿದರು. ಆದರೆ ತೀ.ನಂ.ಶ್ರೀಯವರ ಅಕಾಲ ನಿಧನದಿಂದ ಕನ್ನಡ ಭಾಷಾವಿಜ್ಞಾನಕ್ಕೆ ತುಂಬಲಾರದ ನಷ್ಟವಾಗಿದೆ.

ಇದರ ಜೊತೆಗೆ ತೀ.ನಂ.ಶ್ರೀಯವರು ಉತ್ತಮ ಸಂಶೋಧಿತರಾದ್ದರಿಂದ ತೀ.ನಂ.ಶ್ರೀಯವರು ಪ್ರಾಧ್ಯಾಪಕರಾಗಿದ್ದ ಕಾಲದಲ್ಲಿ ಅವರ ಮಾರ್ಗದರ್ಶನದಲ್ಲಿ ಪಿಹೆಚ್.ಡಿ. ಪದವಿಗಾಗಿ ಅನೇಕ ಅಧ್ಯಾಪಕರು ಸಂಶೋಧನ ವಿದ್ಯಾರ್ಥಿಗಳು ನೋಂದಾಯಿಸಿಕೊಂಡಿದ್ದರು. ಅವರಲ್ಲಿ ಮುಖ್ಯವಾಗಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದಾಗ ಮೈಸೂರಿನಲ್ಲಿ ಇಂಗ್ಲೀಷ್ ಅಧ್ಯಾಪಕರಾಗಿದ್ದ

ಶ್ರೀ ಎಸ್. ಅನಂತನಾರಾಯಣ ಅವರು ಒಬ್ಬರು ಎಂದು ಹೇಳಬಹುದೋ ಅದೇ ರೀತಿ ಶ್ರೀ ಉ.ಕಾ. ಸುಬ್ಬರಾಯಚಾರ್ಯರು 'ರಾಮಾಯಣಕ್ಕೆ ಸಂಬಂಧಪಟ್ಟಂತೆ ಕೆಲಸಮಾಡಿದವರಲ್ಲಿ ಒಬ್ಬರು ಎಂದು ಹೇಳಬಹುದು. ಅದೇ ರೀತಿ ಶ್ರೀ ಕೆ.ಜಿ. ಶಾಸ್ತ್ರಿಯವರು 'ಹವ್ಯಕ ಭಾಷೆಗೆ' ಸಂಬಂಧಪಟ್ಟಂತೆ ಕೆಲಸ ಮಾಡಿದರು. ಈ ರೀತಿಯಾಗಿ ತೀ.ನಂ.ಶ್ರೀಯವರು ಉತ್ತಮ ಸಂಶೋಧಕರು ಆಗಿದ್ದರು ಎಂದು ತಿಳಿದುಬರುತ್ತದೆ. ಇವರ ಹತ್ತಿರ ಪಿಹೆಚ್.ಡಿ. ಪದವಿಗೆ ಮಾರ್ಗದರ್ಶನ ಪಡೆಯಬೇಕೆಂದು ಹತ್ತು ಹಲವು ಜನ ತಮ್ಮ ಹೆಸರನ್ನು ನೋಂದಾಯಿಸಿಕೊಂಡಿದ್ದರು.

ಮೊದಲ ಬಾರಿಗೆ ತೀ.ನಂ.ಶ್ರೀಯವರಿಗೆ ಅವರ ಸಂಶೋಧನ ಶಿಷ್ಯ ಶ್ರೀ ಎಂ. ಚಿದಾನಂದ ಮೂರ್ತಿಯವರಿಗೆ ' ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ನಿಬಂಧಕ್ಕೆ ಪಿಹೆಚ್.ಡಿ ಪದವಿ ದೊರಕಿದಾಗ ತೀ.ನಂ.ಶ್ರೀಯವರಿಗೆ ಅತೀವ ಸಂತೋಷವಾಗಿ ''ನಾನು ಬಂಜೆಯಾಗಲಿಲ್ಲ ಎನ್ನುವ ಉದ್ಗಾರವನ್ನು ಅವರಿಂದ ಹೊರಡಿಸಿತು. ಇದರಿಂದ ಶ್ರೀ ಚಿದಾನಂದಮೂರ್ತಿಯವರಿಗೆ ತೀ.ನಂ.ಶ್ರೀ.ಯವರ ಸಂಶೋಧಕ ಪುತ್ರ ಎಂದು ನಾಮಕರಣವಾಯಿತು.

ಅದೇ ರೀತಿ ತೀ.ನಂ.ಶ್ರೀಯವರು ಮೈಸೂರಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾಗ ದೆಹಲಿಯ ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಭಾಗ ಪ್ರಾರಂಭವಾಗಿ ತದನಂತರ ತೀ.ನಂ.ಶ್ರೀಯವರು ಅನೇಕ ನೇಮಕ ಸಮಿತಿಗಳ ಸದಸ್ಯರಾಗಿ ಮುಂದುವರಿದರು. ಅದರಲ್ಲಿ ದೆಹಲಿ ವಿಶ್ವವಿದ್ಯಾಲಯದ ಆಹ್ವಾನದ ಮೇರೆಗೆ ತೀ.ನಂ.ಶ್ರೀಯವರು ಸದಸ್ಯರಾಗಿ ಹೋಗಿದ್ದರು. ಅದೇ ರೀತಿ ೧೯೬೩ರಲ್ಲಿ ತೀ.ನಂ.ಶ್ರೀಯವರು ಸೇವೆಯಿಂದ ನಿವೃತ್ತರಾದ ನಂತರವೂ ಉಸ್ಮಾನಿಯ ವಿಶ್ವವಿದ್ಯಾಲಯದಲ್ಲಿ ಕನ್ನಡ ರೀಡರ್ ಆಯ್ಕೆ ಸಮಿತಿಗೆ ಸದಸ್ಯರಾಗಿ ಅವರನ್ನು ಆಹ್ವಾನಿಸಿದರು. ತದನಂತರ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾಗಿ ಮುಂದುವರಿದರು.

ಕನ್ನಡ ಸ್ನಾತಕೋತ್ತರ ಅಧ್ಯಯನ ವಿಭಾಗದಲ್ಲಿ ಅಂದರೆ ಮಾನಸ ಗಂಗೋತ್ರಿಗೆ ತೀ.ನಂ.ಶ್ರೀಯವರು ಸಂಶೋಧನ ವಿಭಾಗಕ್ಕೆ ಬಂದ ಮೇಲೆ ಹಲವು ರೀತಿಯಾದ ಮಾರ್ಪಾಡುಗಳು ಕಂಡುಬಂದವು. ತೀ.ನಂ.ಶ್ರೀಯವರ ಕೀರ್ತಿ ಪತ್ರಿಕಾ ಮಾಧ್ಯಮದ ಮೂಲಕ ಸಾಗಿತ್ತು. ಅದರಲ್ಲಿ ೧೯೫೮ರಲ್ಲಿ ತೀ.ನಂ.ಶ್ರೀಯವರ 'ಸಮಾಲೋಕನ' ಎಂಬ ಕೃತಿ ಪ್ರಜಾವಾಣಿ ಪತ್ರಿಕೆಯಲ್ಲಿ ಮೊದಲ ಬಾರಿಗೆ ಪ್ರದರ್ಶನವಾಗಿತ್ತು. ತೀ.ನಂ.ಶ್ರೀಯವರು ಉತ್ತಮ ಭಾಷಣಕಾರರಾದ್ದರಿಂದ 'ಇಂಡಿಯನ್ ಇನ್‌ಸ್ಟಿಟ್ಯೂಟ್

ಆಫ್ ವರ್ಲ್ಡ್ ಕಲ್ಚರ್'ನಲ್ಲಿ ತೀ.ನಂ.ಶ್ರೀಯವರ ಭಾಷಣ ಪ್ರಚಾರಗೊಂಡಿತ್ತು. ಅದೂ ಕನ್ನಡ ಸಾಹಿತ್ಯದ ಮೇಲೆ ಭಾಷಣ ಮಾಡಿದರು. ತೀ.ನಂ.ಶ್ರೀಯವರ ಪ್ರಸಿದ್ಧ ಕೃತಿಯೆಂದರೆ 'ಭಾರತೀಯ ಕಾವ್ಯಮೀಮಾಂಸೆ'ಕೃತಿಗೆ ಮರಣೋತ್ತರ ಪಂಪಪ್ರಶಸ್ತಿ ಒದಗಿತು ಎಂದು ಹೇಳಬಹುದಾಗಿದೆ. ಅದಲ್ಲದೆ ತೀ.ನಂ.ಶ್ರೀಯವರ ಕನ್ನಡ ಮಾಧ್ಯಮ ವ್ಯಾಕರಣ ನಂಟರು ಒಲುಮೆ, ರನ್ನನ ಗದಾಯುದ್ಧ ಸಂಗ್ರಹಂ, ನಂಬಿಯಣ್ಣನ ರಗಳೆ ಇತ್ಯಾದಿ. ಅದು ಅಲ್ಲದೆ ಭಾಷಾಶಾಸ್ತ್ರ, ಶಾಸನಶಾಸ್ತ್ರ ಹಾಗೂ ಜನಪದ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಅನೇಕ ಲೇಖನಗಳನ್ನು ಪ್ರಕಟಿಸಿದ್ದಾರೆ. ಅನೇಕ ಪತ್ರಿಕೆಗಳಲ್ಲಿ ಇದರ ಲೇಖನಗಳ ಸುರಿಮಳೆಯನ್ನು ಕಾಣಬಹುದಾಗಿದೆ. ಇದರ ಪ್ರತಿಯೊಂದು ಲೇಖನವೂ ಅಮೂಲ್ಯವಾದ ಸಾಹಿತ್ಯದ ಆಕರಗಳಾಗಿವೆ ಎಂದು ಹೇಳಬಹುದು.

### 3. ತೀ.ನಂ.ಶ್ರೀಯವರ ಸಮಕಾಲೀನ ವಿದ್ವತ್ ಪರಂಪರೆ

ತೀ.ನಂ.ಶ್ರೀಯವರು ಗ್ರಂಥಸಂಪಾದನ ಶಾಸ್ತ್ರಕ್ಕೆ ಕೈಹಾಕುವ ಮುಂಚೆ ಕನ್ನಡದಲ್ಲಿ ನಡೆದ ಗ್ರಂಥ ಸಂಪಾದನೆಯ ವಿವರಗಳು ಹಾಗೂ ಕನ್ನಡ ಗ್ರಂಥ ಸಂಪಾದನ ಶಾಸ್ತ್ರಕ್ಕೆ ಆ ವಿದ್ವಾಂಸರ ಕೊಡುಗೆಯನ್ನು ಕುರಿತು ವಿವೇಚಿಸಬಹುದಾಗಿದೆ. ಇಪ್ಪತ್ತನೆಯ ಶತಮಾನದಲ್ಲಿ ಕನ್ನಡ ಸಂಶೋಧನ ಕ್ಷೇತ್ರಕ್ಕೆ ಗಣನೀಯವಾದ ಸೇವೆ ಸಲ್ಲಿಸಿದ ಸಂಶೋಧಕರಲ್ಲಿ ಪ್ರಮುಖರಾದವರು ಯಾರೆಂದರೆ ನಮ್ಮ ದೇಶೀಯ ಸಂಶೋಧಕರಾದ ಎಂ.ಎಸ್ ಪುಟ್ಟಣ್ಣ, ಆರ್. ನರಸಿಂಹಚಾರ್ಯ, ಫ.ಗು.ಹಳಕಟ್ಟಿ, ಉತ್ತಂಗಿ ಚೆನ್ನಪ್ಪ, ಮುಳಿಯ ತಿಮ್ಮಪ್ಪಯ್ಯ, ಶಂ.ಬಾ. ಜೋಶಿ ಮುಂತಾದ ಪ್ರಮುಖರು.

ಇಂತಹ ದೇಶೀ ಸಂಶೋಧಕರಿಗೆ ಪಾಶ್ಚಾತ್ಯ ವಿದ್ವಾಂಸರ ಸಂಶೋಧನೆಯ ಪ್ರಭಾವ ಇವರ ಮೇಲೆ ಬಿದ್ದು ತದನಂತರ ನಾಡುನುಡಿಗಾಗಿ ಸೇವೆ ಸಲ್ಲಿಸಲು ಕನ್ನಡ ಗ್ರಂಥಸಂಪಾದನ ಕ್ಷೇತ್ರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ತೀ.ನಂ.ಶ್ರೀಯವರಿಗಿಂತ ಮುಂಚೆ ಕನ್ನಡ ಗ್ರಂಥ ಸಂಪಾದನ ಕ್ಷೇತ್ರಕ್ಕೆ ಪಾಶ್ಚಾತ್ಯ ವಿದ್ವಾಂಸರಾದ ಬಿ.ಎಲ್.ರೈಸ್, ರೇವರೆಂಡ್ ಎಫ್. ಕಿಟ್ಟಲ್, ಹರ್ಮನ್ ಮೊಗ್ಲಿಂಗ್, ಈ ವ್ಯಕ್ತಿಗಳ ಸೇವೆ ಕನ್ನಡ ಗ್ರಂಥ ಸಂಪಾದನ ಕ್ಷೇತ್ರದಲ್ಲಿ ಮರೆಯಲಾಗದಂತಹ ಒಂದು ಸಾಧನೆಯಾಗಿದೆ.

ಬಿ.ಎಲ್. ರೈಸ್ ಇವರು ಪಾಶ್ಚಾತ್ಯ ದೇಶದವರಾಗಿದ್ದವರು ಇವರು ಬೆಳೆದದ್ದು ಬೆಂಗಳೂರಿನಲ್ಲಿ. ಇವರು ಮುಖ್ಯವಾಗಿ ಕನ್ನಡದ ಶಾಸನಕ್ಷೇತ್ರದಲ್ಲಿ ಆಳವಾದ ಪರಿಶ್ರಮವನ್ನು ಹೊಂದಿದ್ದು ಅನೇಕ ಕನ್ನಡ ಶಾಸನಗಳನ್ನು ಪತ್ತೆಹಚ್ಚಿ ಅದಕ್ಕೆ

'ಎಪಿಗ್ರಾಫಿಕ ಕರ್ನಾಟಿಕಾ' ಎಂಬ ಶಾಸನ ಸಂಪುಟವನ್ನು ಹೊರತಂದಿದ್ದಾರೆ. ಜೊತೆಗೆ 'ಕರ್ನಾಟಕ ಭಾಷಭೂಷಣ' ಶಬ್ದಾನುಶಾಸನ, ಪಂಪರಾಮಾಯಣ, ಪಂಪಭಾರತ ಮೊದಲಾದ ಹಳಗನ್ನಡ ಕೃತಿಗಳನ್ನು ಸಂಪಾದಿಸಿರುವುದು ಕನ್ನಡ ಗ್ರಂಥ ಸಂಪಾದನ ಕ್ಷೇತ್ರಕ್ಕೆ ರೈಸ್ ಅವರ ಕೊಡುಗೆಯಾಗಿದೆ. ಅದೇ ರೀತಿ 'ರೆವರೆಂಡ್ ಎಫ್ ಕಿಟಲ್' ರೈಸ್ ಅವರ ಸಮಕಾಲೀನ ವ್ಯಕ್ತಿ ಜರ್ಮನಿಯ ದೇಶದವರಾಗಿದ್ದು ಕನ್ನಡ ಭಾಷೆಯ ಬಗ್ಗೆ ಹಾಗೂ ಕನ್ನಡ ಗ್ರಂಥಸಂಪಾದನ ಕ್ಷೇತ್ರಕ್ಕೆ ತಮ್ಮದೇ ಆದ ಕಾಣಿಕೆಯನ್ನು ಕೊಟ್ಟಿದ್ದಾರೆ.

ಅದರಲ್ಲೂ ಕಿಟಲ್‌ರವರ ಸಂಪಾದನೆಯ ಕೃತಿಗಳೆಂದರೆ 'ಕೇಶಿರಾಜನ ಶಬ್ದಮಣಿ ದರ್ಪಣ' ನಾಗವರ್ಮನ ಛಂದೋಂಬುದಿ ಇತ್ಯಾದಿ ಕಿಟಲ್ ಕೀರ್ತಿ ಎಲ್ಲೆಡೆ ಹರಡುವಂತೆ ಮಾಡಿದ್ದು ಇವರ ಕನ್ನಡ -ಇಂಗ್ಲೀಷ್ ನಿಘಂಟು (೧೮೯೪) ದೇಶಿಯ ಸಂಶೋಧಕರಾದ ಡಿ.ಎಲ್. ನರಸಿಂಹಚಾರ್ ಅವರು ಈ ನಿಘಂಟುವನ್ನು ಕುರಿತು ಈ ರೀತಿ ಹೇಳುತ್ತಾರೆ. ಅದೇನೆಂದರೆ ''ಈ ನಿಘಂಟು ಇವತ್ತಿಗೂ ಕನ್ನಡ ಭಾಷೆಯ ನಿಷ್ಕೃಷ್ಟವಾದ, ಪ್ರಮಾಣಿಭೂತವಾದ ಮಹಾಶಬ್ಧಕೋಶವಾಗಿದೆ. ಇಷ್ಟು ಖಚಿತವೂ, ಶಾಸ್ತ್ರೀಯವೂ, ನಿಯಮಬದ್ಧವೂ ಆದ ಈ ನಿಘಂಟು ಭರತ ಖಂಡದ ಯಾವ ದೇಶೀಭಾಷೆಗೂ ಇಲ್ಲವೆಂದು ಬಲ್ಲವರು ಹೇಳುತ್ತಾರೆ.''[2] ಕಿಟಲ್ ಒಬ್ಬ ಕ್ರೈಸ್ತಮತ ಪ್ರಚಾರಕನೇ ಆಗಿದ್ದರೂ ಕನ್ನಡ ಗ್ರಂಥಗಳ ಅವಲೋಕನದಲ್ಲಿ ಅವನಿಗೆ ಇರುವ ಆಸಕ್ತಿ ದೇಶಿಯ ಸಂಶೋಧಕರ ಮೇಲೆ ತನ್ನದೇ ಆದ ಪ್ರಭಾವ ಬೀರಿತು ಎಂದು ಹೇಳಬಹುದಾಗಿದೆ.

ಅದೇ ರೀತಿ ಕಿಟಲ್ ರೈಸ್‌ರಂತೆ ಕನ್ನಡ ಗ್ರಂಥ ಸಂಪಾದನ ಶಾಸ್ತ್ರಕ್ಕೆ ಸೇವೆಯನ್ನು ಸಲ್ಲಿಸಿದ ಮತ್ತೊಬ್ಬ ವಿದ್ವಾಂಸ ಹರ್ಮನ್ ಮೊಗ್ಲಿಂಗ್ ಈತ ಪಾಶ್ಚಾತ್ಯ ವಿದ್ವಾಂಸನು ಕಿಟಲ್‌ರವರ ಸಮಕಾಲೀನರು ಎಂದು ಹೇಳಬಹುದು. ಇವರ ಸೇವೆಯು ಕನ್ನಡ ಗ್ರಂಥ ಸಂಪಾದನ ಕ್ಷೇತ್ರದಲ್ಲಿ ಬಹಳ ಮುಖ್ಯವಾದುದು ಎಂದು ಹೇಳಬಹುದು. ಮೊಗ್ಲಿಂಗ್ ಕೂಡ ಜರ್ಮನಿಯ ವಿದ್ವಾಂಸನಾಗಿದ್ದು ಆತ ಕನ್ನಡದ ಗ್ರಂಥಗಳ ಅವಲೋಕನದಲ್ಲಿ ಪಟ್ಟಶ್ರಮ ಬಹಳ ರೋಮಾಂಚನಕಾರಿಯಾದದ್ದು ಎಂದು ತಿಳಿಯಬಹುದು.

ಮೊಗ್ಲಿಂಗ್ ಮೊದಲ ಬಾರಿಗೆ ಕನ್ನಡ ಹಳೆಯಗ್ರಂಥಗಳಾದ 'ಜೈಮಿನಿ ಭಾರತ' ತೊರವೆ ರಾಮಾಯಣ ಹಾಗೂ ಕನ್ನಡ ದಾಸರ ಕೀರ್ತನೆಗಳನ್ನು ಮೊದಲ ಬಾರಿಗೆ ಸಂಗ್ರಹಿಸಿದ ಕೀರ್ತಿ ಮೊಗ್ಲಿಂಗ್‌ಗೆ ಸೇರುತ್ತದೆ. ಈ ರೀತಿಯಾಗಿ ಪೂರ್ವ ವಿದ್ವಾಂಸರು ಅಂದರೆ ಪಾಶ್ಚಾತ್ಯ ವಿದ್ವಾಂಸರು ಕನ್ನಡ ಗ್ರಂಥ ಸಂಪಾದನ ಕ್ಷೇತ್ರಕ್ಕೆ ಕೊಟ್ಟ ಕೊಡುಗೆ

ಅಮೂಲ್ಯವಾದುದು ಇವರ ವಿದ್ವತ್ ಪ್ರಪಂಚವನ್ನು ಮುಂದಿನ ದೇಶೀ ಸಂಶೋಧಕರಿಗೆ ಅಡಿಪಾಯವಾಗಿ ರೂಪಿಸಿ ಭದ್ರವಾದ ಬುನಾದಿಯನ್ನು ಹಾಕಿಕೊಟ್ಟರು. ಇಂಥ ಒಂದು ಮಾದರಿ ಮುಂದಿನ ಕನ್ನಡ ವಿದ್ವಾಂಸರಿಗೆ ದಾರಿದೀಪವಾಯಿತು ಎಂದು ಹೇಳಬಹುದು.

ತೀ.ನಂ.ಶ್ರೀಯವರಿಗಿಂತ ಮೊದಲೆ ನಮ್ಮ ಕನ್ನಡ ಗ್ರಂಥ ಸಂಪಾದನೆಯಲ್ಲಿ ಹೆಚ್ಚಿನ ಆಸಕ್ತಿವಹಿಸಿದವರು ಯಾರೆಂದರೆ ಎಂ.ಎಸ್. ಪುಟ್ಟಣ್ಣ, ಆರ್. ನರಸಿಂಹಾಚಾರ್ಯ, ಶಿರಾಳಕೊಪ್ಪ ಚನ್ನಮಲ್ಲಪ್ಪ, ಫ.ಗು. ಹಳಕಟ್ಟಿ, ಉತ್ತುಂಗಿ ಚೆನ್ನಪ್ಪ, ಟಿ.ಎಸ್. ವೆಂಕಣ್ಣಯ್ಯ, ಗೋವಿಂದಪೈ, ಶಂ.ಬಾ. ಜೋಶಿ, ಮುಳಿಯ ತಿಮ್ಮಪ್ಪಯ್ಯ, ಕಪಟರಾಳ ಕೃಷ್ಣರಾಯ, ಎಂ.ಹೆಚ್. ಕೃಷ್ಣ ಹಾಗೂ ಎಂ.ಆರ್. ಶ್ರೀನಿವಾಸಮೂರ್ತಿ ಇತ್ಯಾದಿ ವಿದ್ವಾಂಸರು.

ಈ ಮೇಲಿನ ವಿದ್ವಾಂಸರು ತೀ.ನಂ.ಶ್ರೀಯವರಿಗಿಂತ ಮೊದಲೆ ಕನ್ನಡ ಗ್ರಂಥ ಸಂಪಾದನ ಕ್ಷೇತ್ರಕ್ಕೆ ನೀಡಿರುವ ಕಾಣಿಕೆ ಬಹಳ ಮಹತ್ವದ್ದು. ಇವರ ನಂತರ ತೀ.ನಂ.ಶ್ರೀ, ಡಿ.ಎಲ್.ಎನ್. ಇತ್ಯಾದಿಗಳು ಕಾಣಿಸಿಕೊಳ್ಳುತ್ತಾರೆ. "ಮೊದಲ ಗುಂಪಿನ ವ್ಯಕ್ತಿಗಳು ಕರ್ನಾಟಕದ ಬಗ್ಗೆ ಶ್ರಮಿಸಿದವರು. ಇವರ ಸಂಶೋಧನೆಯ ಫಲದಿಂದ ಕವಿಚರಿತೆ, ವಚನಸಾಹಿತ್ಯ, ಸಿದ್ಧರಾಮಚರಿತ್ರೆ, ಕರ್ನಾಟಕ ಸಂಸ್ಕೃತಿ, ಹರಿಶ್ಚಂದ್ರ ಕಾವ್ಯ, ಕವಿರಾಜಮಾರ್ಗ ಇತ್ಯಾದಿ ಗ್ರಂಥಗಳ ಉಗಮಕ್ಕೆ ಕಾರಣವಾಯಿತು."[೮] ಇವರನ್ನು ತೀ.ನಂ.ಶ್ರೀಯವರಿಗಿಂತ ಹಿಂದಿನ ವಿದ್ವಾಂಸರು ಎಂದು ಹೇಳಬಹುದು.

ಇವರ ನಂತರ ನಮಗೆ ಸಿಗುವಂತಹುದು ತೀ.ನಂ.ಶ್ರೀಯವರ ಸಮಕಾಲೀನ ವ್ಯಕ್ತಿಗಳ ಬಗ್ಗೆ ಮಾಹಿತಿ ಸಿಗುತ್ತದೆ. ಅದರಲ್ಲಿಯೂ ಮುಖ್ಯವಾಗಿ ಕನ್ನಡ ಗ್ರಂಥ ಸಂಪಾದನ ಕ್ಷೇತ್ರದಲ್ಲಿ ದುಡಿದವರೆಂದರೆ ಕೆ.ಜಿ. ಕುಂದಣ್ಣಗಾರ, ಆರ್.ಎಸ್. ಪಂಚಮುಖಿ, ಬೆಟಗೇರಿ ಕೃಷ್ಣಶರ್ಮ, -ಸೇಡಿಯಾಪು ಕೃಷ್ಣಭಟ್ಟರು, ಹಲಸಂಗಿ ಚೆನ್ನಮಲ್ಲಪ್ಪನವರು, ತೀ.ನಂ.ಶ್ರೀಕಂಠಯ್ಯನವರ ಪ್ರಮುಖ ಸ್ನೇಹಿತರಾಗಿರುವ ರಂ.ಶ್ರೀ.ಮುಗಳಿ, ಮರಿಯಪ್ಪಭಟ್ಟ, ಅ.ನೆ.ಉಪಾಧ್ಯೆ ಹಾಗೂ ಡಿ.ಎಲ್.ಎನ್. ಇತ್ಯಾದಿ ವಿದ್ವಾಂಸರು. ಗ್ರಂಥಸಂಪಾದನ ಕ್ಷೇತ್ರಕ್ಕೆ ಇವರ ಸಾಧನೆ ಅಪಾರವಾದದ್ದು.

ಈ ಕಾಲಘಟ್ಟದಲ್ಲಿ ಕನ್ನಡದ ಅನೇಕ ಗ್ರಂಥಗಳು ಮೈತಳೆದವು. ಅದರಲ್ಲಿ ಮುಖ್ಯವಾಗಿ ಕಾವ್ಯಾವಲೋಕನ, ಶಬ್ದಾನುಶಾಸನ, ಲೀಲಾವತಿ ಪುರಾಣ, ಕನ್ನಡಭಾಷಾ ಚರಿತ್ರೆ, ಇತ್ಯಾದಿ ಗ್ರಂಥಗಳು ದೇಶೀಯ ವಿದ್ವಾಂಸರಿಂದ ಒಂದು ಪರಿಪೂರ್ಣತೆಯನ್ನು

ಪಡೆದುಕೊಂಡಿತು. ತೀ.ನಂ.ಶ್ರೀಯವರ ಕಾಲದ ವಿದ್ವತ್ ಪರಂಪರೆ ಕನ್ನಡ ಸಾಹಿತ್ಯ ಚರಿತ್ರೆಯ ಮೇಲೆ ತನ್ನದೇ ಆದ ಪ್ರಭಾವ ಬೀರುತ್ತದೆ.

ತೀ.ನಂ.ಶ್ರೀಯವರಿಗಿಂತ ಮೊದಲ ಪೀಳಿಗೆಯ ವಿದ್ವಾಂಸರು ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಅಮೂಲ್ಯವಾದ ಕಾಣಿಕೆ ಸಲ್ಲಿಸಿದರು. ಅದೇ ರೀತಿ ಅವರ ನಂತರ ಬಂದ ವಿದ್ವಾಂಸರಾದ ತೀ.ನಂ.ಶ್ರೀಯವರ ಸಮಕಾಲೀನತೆಗೆ ಸೇರಿರುವವರು ಎಂದು ಹೇಳಬಹುದು. ಅವರಲ್ಲಿ ಡಿ.ಎಲ್.ಎನ್. ಶಿ.ಶಿ.ಬಸವನಾಳ, ಗೋರೆಬಾಳ ಹನುಮಂತರಾಯ, ಕೆ.ಜಿ. ಕುಂದಣ್ಣ, ಆರ್.ಎಸ್. ಪಂಚಮುಖಿ, ಬೆಟ್ಟಗಿರಿ ಕೃಷ್ಣಶರ್ಮ, ಸೇಡಿಯಾಪು ಕೃಷ್ಣಭಟ್ಟ, ಪ್ರ.ಗೋಕುಲಕರ್ಣಿ, ಹಲಸಂಗಿ ಚೆನ್ನಮಲ್ಲಪ್ಪ, ಶಿ.ಚೆ. ನಂದಿಮಠ, ರಂ.ಶ್ರೀ.ಮುಗಳಿ, ಎಂ. ಮರಿಯಪ್ಪಭಟ್ಟ, ಆ.ನೆ. ಉಪಾಧ್ಯೆ, ಮಿರ್ಜಿ ಅಣ್ಣಾರಾಯ ಇತ್ಯಾದಿ ವಿದ್ವಾಂಸರ ಕೊಡುಗೆ ಕನ್ನಡ ಗ್ರಂಥಸಂಪಾದನ ಕ್ಷೇತ್ರಕ್ಕೆ ಅಮೂಲ್ಯವಾದ ಕಾಣಿಕೆಯಾಗಿದೆ.

ಈ ಮೇಲಿನ ವಿದ್ವಾಂಸರು ತೀ.ನಂ.ಶ್ರೀಯವರ ಸಮಕಾಲೀನರಾಗಿದ್ದು ಈ ವಿದ್ವಾಂಸರ ಸಂಶೋಧನೆಯ ಫಲದಿಂದ ಕನ್ನಡ ಅನೇಕ ವಿದ್ವತ್ ಗ್ರಂಥಗಳು ಬೆಳಕಿಗೆ ಬಂದವು. ಅವು ಯಾವುದೆಂದರೆ ಚೆನ್ನಬಸವ ಪುರಾಣ, ಪ್ರಭುಲಿಂಗ ಲೀಲೆ, ಶಬರಶಂಕರ ವಿಕಾಸ, ಹರಿಹರನ ಶತಕಗಳು, ಶಬ್ದಾನುಶಾಸನ, ಹರಿದಾಸ ಕೀರ್ತನೆ, ಕನ್ನಡ ಭಾಷಾಶಾಸ್ತ್ರ, ಸಾಹಿತ್ಯಚರಿತ್ರೆ, ಹಸ್ತಿಮಲ್ಲನ ಪೂರ್ವಪುರಾಣ, ಕುಮುದೇಂದು ರಾಮಾಯಣ, ಪಂಪನ ಆದಿಪುರಾಣ, ನೇಮಿಚಂದ್ರನ ಲೀಲಾವತಿ ಪ್ರಬಂಧ, ಕರ್ನಾಟಕದ ಶಾಸನಗಳನ್ನು ಕುರಿತ ಸಂಶೋಧನೆಯ ಪ್ರಬಂಧಗಳು, ಕರ್ನಾಟಕ ಜನಜೀವನ (ಸಂಸ್ಕೃತಿ ಸಂಶೋಧನೆ) ಛಂದಶಾಸ್ತ್ರದ ಬಗ್ಗೆ 'ಛಂದೋಗತಿ' 'ಕನ್ನಡ ಛಂದಸ್ಸು', 'ಕನ್ನಡ ಭಾಷಾ ಚರಿತ್ರೆ''ಭಾರತದ ಛಂದಸ್ಸು ಶಾಸ್ತ್ರ, ಜನಪದ ಕ್ಷೇತ್ರಕ್ಕೆ ಸಂಬಂಧಿಸಿದ ಸಂಶೋಧನೆಗಳನ್ನು, ಕನ್ನಡ ಶಾಸನಗಳ ಬಗ್ಗೆ ಆದ ಸಂಶೋಧನಾ ಲೇಖನಗಳು, ಸಂಗೀತ ರತ್ನಾಕರ, ಛಂದಸ್ವರ, ವರ್ಧಮಾನ ಪುರಾಣ, ಜಾತಕತಿಲಕ, ಸದ್ಗುರುರಹಸ್ಯ, ವಿಷ್ಣುಪುರಾಣ, ಸರ್ವಜ್ಞ ವಚನಗಳು, ಬೃಹತ್ ಕೋಶ, ಪಂಪರಾಮಾಯಣ ಸಂಗ್ರಹ, ವಡ್ಡಾರಾಧನೆ, ಶಬ್ದಮಣಿದರ್ಪಣ, ಪಂಪಭಾರತ ಪೀಠಿಕೆ, ಜೈನಧರ್ಮದ ಶಾಸನಗಳನ್ನು ಕುರಿತಾದ ಅನೇಕ ಸಂಶೋಧನ ಲೇಖನಗಳು ಚಿನ್ಮಯ ಚಿಂತನೆಗಳು, ವರ್ಧಮಾನ ಪುರಾಣ, ಸಿದ್ಧರಾಮ ಚರಿತ್ರೆ, ಇತ್ಯಾದಿ ಗ್ರಂಥಗಳು ಬೆಳಕಿಗೆ ಬಂದವು.

ಈ ಕಾಲಘಟ್ಟದ ಸಂಶೋಧಕರು ಕನ್ನಡನಾಡು-ನುಡಿಗಾಗಿ ಬಹಳ ಶ್ರಮಿಸಿದವರು ಎಂದು ಹೇಳಬಹುದು. ಕನ್ನಡದ ಅನೇಕ ಗ್ರಂಥಗಳು ಸಂಶೋಧಿಸಲ್ಪಟ್ಟು ಈ ರೀತಿಯಾದ ಸಂಶೋಧನೆಯು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರಮುಖ ವಿಷಯವಾಗಿದೆ.

ತೀ.ನಂ.ಶ್ರೀಯವರು ಸಮಕಾಲೀನರು ಕನ್ನಡ ಗ್ರಂಥಗಳ ಬಗ್ಗೆ ಒಮ್ಮನಿಸ್ಸಿನಿಂದ ಗ್ರಂಥಗಳನ್ನು ಸಂಶೋಧಿಸಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಉತ್ತಮ ಸ್ಥಾನವನ್ನು ಗಳಿಸಿದ್ದಾರೆ. ಈ ವಿದ್ವಾಂಸರಲ್ಲಿ ತಮ್ಮದೇ ಆದ ಪರಿಶ್ರಮವಿರುವುದನ್ನು ಅವರ ಗ್ರಂಥಗಳ ಹಿನ್ನೆಲೆಯಲ್ಲಿ ಕಾಣಬಹುದು.

ಕನ್ನಡದಲ್ಲಿ ಇಂಥ ಗ್ರಂಥಗಳು ಬೆಳಕು ಕಾಣಬೇಕಾದರೆ ನಮ್ಮ ದೇಶೀಯ ಸಂಶೋಧಕರ ಸೇವೆಯನ್ನು ಮೆಚ್ಚಬೇಕಾದುದು ಶಾಸನ, ಭಾಷೆ, ಜನಪದ ಕ್ಷೇತ್ರಗಳಲ್ಲಿ ಅವರು ಮಾಡಿರುವ ಸೇವೆ ಬಹಳ ಪ್ರಮುಖವಾದುದು. ಈ ಅಧ್ಯಯನವು ಮುಖ್ಯವಾಗಿ ತೀ.ನಂ.ಶ್ರಿಯವರ ಸಮಕಾಲೀನ ವಿದ್ವಾಂಸರ ಸೇವೆಯನ್ನು ಒಂದು ಕಡೆ ಚರ್ಚಿಸಿದರೆ ಇನ್ನೊಂದು ಕಡೆ ತೀ.ನಂ.ಶ್ರೀಯವರು ಕನ್ನಡ ಗ್ರಂಥ ಸಂಪಾದನಕ್ಕೆ ಅನುಗುಣವಾಗಿ ಅವರ ಶ್ರಮವನ್ನು ಸೂಚಿಸುತ್ತದೆ. ಸಮಕಾಲೀನರಂತೆ ತೀ.ನಂ.ಶ್ರೀಯವರು ಉತ್ತಮ ದೇಶೀಯ ಸಂಶೋಧಿತರಾಗಿರುವುದನ್ನು ಕಾಣಬಹುದಾಗಿದೆ. ಇವರ ಸಂಪಾದನೆ ಕನ್ನಡ ಸಾಹಿತ್ಯದ ಅನೇಕ ಕ್ಷೇತ್ರಗಳಲ್ಲಿ ಮುಂದುವರಿದಿರುವುದನ್ನು ಕಾಣಬಹುದಾಗಿದೆ. ಅದರಲ್ಲಿ ಮುಖ್ಯವಾಗಿ ಶಾಸನ ಭಾಷೆ, ಜನಪದ ಇತ್ಯಾದಿ ರೀತಿಗಳಲ್ಲಿ ಇವರ ಸಂಶೋಧನೆ ಮುಂದುವರಿಯುತ್ತದೆ. ಅದೇ ರೀತಿ ಹಳಗನ್ನಡ, ನಡುಗನ್ನಡ, ಹೊಸಗನ್ನಡ, ವಿಮರ್ಶೆ ಇತ್ಯಾದಿ ಕ್ಷೇತ್ರಗಳಲ್ಲಿ ತೀ.ನಂ.ಶ್ರೀಯವರು ಮಾಡಿರುವ ಸಂಶೋಧನೆ ಕನ್ನಡ ವಿದ್ವತ್ ಕ್ಷೇತ್ರಕ್ಕೆ ಅಮೂಲ್ಯವಾದ ಆಕರಗಳಾಗಿವೆ ಎಂದು ಹೇಳಬಹುದು.

ತೀ.ನಂ.ಶ್ರೀಯವರ ಸಂಶೋಧನೆಯ ಫಲದಿಂದ ಮೂಡಿಬಂದ ಆಕರಗ್ರಂಥಗಳೆಂದರೆ ನಂಬಿಯಣ್ಣನ ರಗಳೆ, ಗದಾಯುದ್ಧ, ಹೆಣ್ಣುಮಕ್ಕಳ ಪದಗಳು ಇತ್ಯಾದಿ ಗ್ರಂಥಗಳ ಉಗಮಕ್ಕೆ ಕಾರಣವಾಯಿತು. ಇದೂ ಅಲ್ಲದೆ ಅನೇಕ ಬಿಡಿಲೇಖನಗಳನ್ನು ಸಂಪಾದಿಸಿದ್ದಾರೆ. ಇವು ಸಂಶೋಧನೆಗೆ ಸಂಬಂಧಪಟ್ಟ ಲೇಖನಗಳಾಗಿವೆ. ಈ ಲೇಖನಗಳಲ್ಲಿ ಶಾಸನ, ಭಾಷೆ ಹಾಗೂ ಜನಪದ ಸಾಹಿತ್ಯಕ್ಕೆ ಸಂಬಂಧಪಟ್ಟ ಲೇಖನಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಅದರಲ್ಲಿ 'ಕೆರೆಗೆ ಹಾರ'...ಇತ್ಯಾದಿ ಕೆಲವು ಲೇಖನಗಳು ಕನ್ನಡ ಸಂಶೋಧನೆಯ ಇತಿಹಾಸದಲ್ಲಿ ಪ್ರಮುಖ

ವೈಲುಗಲ್ಲಾಗಿದೆ. ತೀ.ನಂ.ಶ್ರೀಯವರ ಉತ್ತಮ ಸಂಶೋಧಕರು ಎಂದು ತಿಳಿಯಬಹುದಾಗಿದೆ.

**4. ಕನ್ನಡ ವಿದ್ವತ್ ಪರಂಪರೆಗೆ ತೀ.ನಂ.ಶ್ರೀಯವರ ಕೊಡುಗೆ**

ತೀ.ನಂ.ಶ್ರೀಯವರು ಮೆಚ್ಚುಗೆಗಾಗಿ ಬದುಕಿದವರಲ್ಲ. ಜ್ಞಾನಕ್ಕಾಗಿ ಬದುಕಿದವರು. ಅವರು ಬರೆದದ್ದು ವಾಸ್ತವವಾಗಿ ಕಡಿಮೆ. ಇದಕ್ಕೆ ಕಾರಣ ಪ್ರತಿಯೊಂದರಲ್ಲೂ ಪರಿಪೂರ್ಣತೆಯನ್ನು ನಿರೀಕ್ಷಿಸಿದ್ದು. ಆದರೆ ಅವರು ಬರೆದದ್ದೆಲ್ಲ ಬೆಲೆಯುಳ್ಳದ್ದು ಎಂದು ಹೇಳಬಹುದಾಗಿದೆ. ತೀ.ನಂ.ಶ್ರೀಯವರು ಕನ್ನಡ ಗ್ರಂಥಸಂಪಾದನ ಕ್ಷೇತ್ರಕ್ಕೆ ಅವರದೇ ಆದ ಕೊಡುಗೆಗಳನ್ನು ಕೊಟ್ಟಿದ್ದಾರೆ. ಪಾಂಡಿತ್ಯ-ರಸಿಕತೆಗಳ ಅಪೂರ್ವ ಸಂಗಮವಾಗಿದ್ದ ಅವರೊಡನೆ ಇನ್ನೊಬ್ಬರನ್ನು ಹೋಲಿಸಲು ಕಷ್ಟವಾದೀತು. ಬೇರೆ ಆಕರ್ಷಣೆಗಳನ್ನು ತೊರೆದು ಕೇವಲ ಉಪಾಧ್ಯಾಯ ಜೀವನವನ್ನು ಆರಿಸಿಕೊಂಡ ತೀ.ನಂ.ಶ್ರೀ.ಯವರು ಮೈಸೂರು ಕರ್ನಾಟಕ, ಪುಣೆ ವಿಶ್ವವಿದ್ಯಾಲಯಗಳಲ್ಲಿ ಸಾವಿರಾರು ವಿದ್ಯಾರ್ಥಿಗಳಿಗೆ ಜ್ಞಾನಜ್ಯೋತಿಯನ್ನು ನೀಡಿದವರು. ಕರ್ನಾಟಕದಲ್ಲಿ ಮಾತ್ರವಲ್ಲದೆ ಪಾಶ್ಚಾತ್ಯ ದೇಶಗಳಲ್ಲಿಯೂ ಕೂಡ ಖ್ಯಾತರಾಗಿ ಕನ್ನಡ ವಿದ್ವತ್‌ಗೆ ಗೌರವವನ್ನು ತಂದುಕೊಟ್ಟವರು.

ಈ ಅಧ್ಯಾಯದಲ್ಲಿ ತೀ.ನಂ.ಶ್ರೀಯವರು ಕನ್ನಡ ವಿದ್ವತ್ ಪರಂಪರೆಗೆ ನೀಡಿರುವ ಅಮೂಲ್ಯವಾದ ಕಾಣಿಕೆಯನ್ನು ಹಾಗೂ ಕನ್ನಡ ಗ್ರಂಥಸಂಪಾದನ ಕ್ಷೇತ್ರದಲ್ಲಿ ಅವರು ಮಾಡಿರುವ ಅಮೂಲ್ಯವಾದ ಸಾಧನೆಯನ್ನು ಈ ಅಧ್ಯಯನದಲ್ಲಿ ಕಟ್ಟಿಕೊಡಲಾಗುತ್ತದೆ. ತೀ.ನಂ.ಶ್ರೀಯವರು ಅಪ್ಪಟ ವಿದ್ವಾಂಸರು, ಕುಶಾಗ್ರಮತಿಗಳು, ಆಲೋಚನಾಪರ ಶಕ್ತಿಯನ್ನು ಉಳ್ಳಂಥ ಸಾಹಿತಿ, ಇವರ ಸಂಪಾದನೆ ಹಾಗೂ ಅವರ ಕೃತಿಗಳ ಹಿನ್ನೆಲೆ ಗಮನಿಸಿದಾಗ ಅವರ ಪರಿಶ್ರಮದ ಬಗ್ಗೆ ನಮಗೆ ಕುತೂಹಲ ಮೂಡುತ್ತದೆ. ತೀ.ನಂ.ಶ್ರೀಯವರು ಈ ಶತಮಾನದ ನಾಡು ನುಡಿಗಾಗಿ ಸೇವೆಸಲ್ಲಿಸಿದ ಮಹನೀಯರಾಗಿದ್ದಾರೆ. ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ತಮ್ಮ ಆಸಕ್ತಿಯನ್ನು ಬೆಳೆಸಿಕೊಂಡು ಕನ್ನಡ ಸಾಹಿತ್ಯಕ್ಕೆ ತನ್ನದೇ ಆದ ಒಂದು ಗೌರವವನ್ನು ತಂದುಕೊಟ್ಟ ಕನ್ನಡ ವಿದ್ವತ್ ಪರಂಪರೆಗೆ ತಮ್ಮದೇ ಆದ ಅಮೂಲ್ಯವಾದ ಸಾಹಿತ್ಯ ಕೃತಿರತ್ನಗಳನ್ನು ಅರ್ಪಿಸಿದ್ದಾರೆ. "ತೀ.ನಂ.ಶ್ರೀಯವರು ಬಹುಶ್ರುತರು. ಅವರೊಡನೆ ಸಂಭಾಷಿಸುತ್ತಿದ್ದರೆ ಅನೇಕ ಉದ್ಗ್ರಂಥಗಳ ಸಾರ ನಮಗೆ ಅನಾಯಾಸವಾಗಿ ದೊರೆಯುತ್ತಿತ್ತು' ಎಂದು ತೀ.ನಂ.ಶ್ರೀಯವರ ಆಪ್ತ ಸ್ನೇಹಿತರಾದ ಪು.ತಿ.ನರಸಿಂಹಾಚಾರ್ ಈ ಮಾತನ್ನು ಹೇಳುತ್ತಾರೆ."[೬]

ತೀ.ನಂ.ಶ್ರೀಕಂಠಯ್ಯನವರ ಈ ವಿದ್ವತ್‌ಗೆ ಕಾರಣರಾದ ಅವರ ಗುರುಗಳಾದ ಅಥವಾ ಮಾರ್ಗದರ್ಶಿಗಳು ಆದ ಎಂ. ಹಿರಿಯಣ್ಣ, ಟಿ.ಎಸ್. ವೆಂಕಣ್ಣಯ್ಯ ಹಾಗೂ ಬಿ.ಎಂ. ಶ್ರೀಕಂಠಯ್ಯ ಇಂತವರ ವಿದ್ವತ್ತಿನ ಹಿನ್ನೆಲೆಯಲ್ಲಿ ಬೆಳೆದ ತೀ.ನಂ.ಶ್ರೀಯವರು ಬಹುಮುಖವಾದ ವಿದ್ವತ್ ಉಳ್ಳವರಾಗಿದ್ದಾರೆ. ಅವರ ದೀರ್ಘವಾದ ಅಧ್ಯಯನ ಅಭಿರುಚಿಯ ಮುಂದೆ ಒಬ್ಬ ದೊಡ್ಡ ಸಂಶೋಧಕನಾಗಲು ಸಹಾಯಮಾಡಿತು.

ತೀ.ನಂ.ಶ್ರೀಯವರ ವಿದ್ವತ್ ಒಂದೇ ಕ್ಷೇತ್ರದಲ್ಲಿ ನೆಲೆಯೂರದೆ ಅದು ವಿದ್ವತ್ ಅನೇಕ ಮುಖಗಳಲ್ಲಿ ಅನೇಕ ಮುಖಗಳಲ್ಲಿ ಮುಂದುವರಿದಿರುವುದನ್ನು ಕಾಣಬಹುದಾಗಿದೆ. ಅದರಲ್ಲಿಯೂ ಪ್ರಾಚೀನ ಸಾಹಿತ್ಯ, ಆಧುನಿಕ ಸಾಹಿತ್ಯ, ಅಲಂಕಾರಶಾಸ್ತ್ರ, ಛಂದಸ್ಸು, ವ್ಯಾಕರಣ, ಗ್ರಂಥಸಂಪಾದನೆ, ಭಾಷಾಶಾಸ್ತ್ರ, ಸಂಶೋಧನೆ ಇತ್ಯಾದಿ ಕ್ಷೇತ್ರಗಳಲ್ಲಿ ಅವರು ತೋರಿರುವ ವಿದ್ವತ್ ಅಮೂಲ್ಯವಾದುದು ಎಂದು ಹೇಳಬಹುದು. ಇದರ ಜೊತೆಗೆ ಇಂಗ್ಲೀಷ್ ಮತ್ತು ಸಂಸ್ಕೃತ ಭಾಷೆಗಳಲ್ಲಿ ಇರುವ ಗಾಢವಾದ ಪಾಂಡಿತ್ಯ ಅವರಲ್ಲಿತ್ತು. ಕನ್ನಡದ ಹಿರಿಯ ಸಂಶೋಧಕರಲ್ಲಿ ತೀ.ನಂ.ಶ್ರೀಯವರು ಒಬ್ಬರಾಗಿದ್ದಾರೆ. ಇಂತಹ ಕನ್ನಡ ಭಾಷೆ ತನ್ನ ಪರಿಪೂರ್ಣತೆಯನ್ನು ಪಡೆಯಲು ಇಂತಹ ವಿದ್ವಾಂಸರ ಸೇವೆ ಅಪಾರವಾದುದು ಎಂದು ಹೇಳಬಹುದು. ಬಹುಮುಖ ಪ್ರತಿಭೆಯುಳ್ಳ ತೀ.ನಂ.ಶ್ರೀಯವರು ಕನ್ನಡ ವಿದ್ವತ್ ಪರಂಪರೆಗೆ ಕೊಟ್ಟ ಕಾಣಿಕೆ ಅಮೂಲ್ಯವಾದುದು.

ತೀ.ನಂ.ಶ್ರೀಯವರು ಕನ್ನಡ ಗ್ರಂಥಸಂಪಾದನ ಶಾಸ್ತ್ರಕ್ಕೆ ಕೊಟ್ಟ ಕೊಡುಗೆಯೂ ಬಹಳ ಅಮೂಲ್ಯವಾದುದು. ಅದರಲ್ಲಿಯೂ ಪ್ರಾಚೀನ ಗ್ರಂಥಗಳ ಹುಡುಕಾಡುವಿಕೆ ಹಾಗೂ ಅವರ ಕಾಲ ಹಾಗೂ ಕವಿಯನ್ನು ಕಂಡುಹಿಡಿದು ಇದರ ಬಗ್ಗೆ ಉದ್ದೀಪ್ತರಾಗಿ ಪ್ರಾಚೀನ ಸಾಹಿತ್ಯದ ಬಗ್ಗೆ ಕನಿಕರದಿಂದ ಕನ್ನಡದ ಕೆಲವು ಹಳೆಯ ಗ್ರಂಥಗಳ ಶೋಧನೆಯಲ್ಲಿ ತೊಡಗಿರುವುದು ಒಂದು ಅದ್ಭುತ ವಿಷಯವಾಗಿದೆ. ಭಾಷಾ ಶಾಸ್ತ್ರದಲ್ಲಿ ಉತ್ತಮ ಪಂಡಿತರಾಗಿದ್ದು ಅತ್ಯಂತ ವಿದ್ವತ್‌ನ್ನು ಪಡೆದವರು ಮತ್ತೊಬ್ಬರಿಲ್ಲವೆಂದು ಹೇಳಬಹುದು. ಕನ್ನಡ ನಾಡಿನ ಹಿರಿಯ ತಲೆಮಾರಿನವರು, ಹಿರಿಯ ಸಾಹಿತಿಗಳು, ಪಂಡಿತರು, ಉತ್ತಮ ಜ್ಞಾನ ಕೌಶಲ್ಯ ಹೊಂದಿರುವವರು ತೀ.ನಂ.ಶ್ರೀಯವರಾಗಿದ್ದಾರೆ.

ತೀ.ನಂ.ಶ್ರೀಕಂಠಯ್ಯನವರ ವಿದ್ವತ್ ಬಹುಮುಖವಾದುದು. ಅವರ ಕನ್ನಡ ಸಾಹಿತ್ಯದ ದೃಷ್ಟಿಯು ಇಂಗ್ಲೀಷ್ ಸಂಸ್ಕೃತ ಸಾಹಿತ್ಯಗಳ ಆಲೋಚನೆಯಿಂದ ಪರಿಷ್ಕಾರ ಪಡೆದಿತ್ತು. ತೀ.ನಂ.ಶ್ರೀಯವರ ಶ್ರೇಷ್ಠ ಕಾವ್ಯಮೀಮಾಂಸೆಯ ಗ್ರಂಥಕ್ಕೆ 'ಪಂಪ' ಪ್ರಶಸ್ತಿ

ಲಭಿಸಿತು. ಇದಕ್ಕೆ ಮೂಲ ಸಂಸ್ಕೃತದಲ್ಲಿ ಬಂದಿರುವ ಎಲ್ಲಾ ಕೃತಿಗಳ ಅಧ್ಯಯನ ಮಾಡಿ ರಚಿಸಿದ ಮಹಾಕೃತಿ ಭಾರತದ ಬೇರ್ಯಾವ ಭಾಷೆಯಲ್ಲೂ ಕಾವ್ಯ ಮೀಮಾಂಸೆಯನ್ನು ಕುರಿತ ವಿಮರ್ಶೆ ಗ್ರಂಥ ಕಂಡುಬಂದಿಲ್ಲ.

ಅದೇ ರೀತಿ ತೀ.ನಂ.ಶ್ರೀಯವರ 'ರಾಕ್ಷಸನ ಮುದ್ರಿಕೆ' ಇದು ಚಂದ್ರಗುಪ್ತನನ್ನು ಕುರಿತ ಗದ್ಯನಾಟಕ. ತೀ.ನಂ.ಶ್ರೀಯವರ ಮತ್ತೊಂದು ಕೃತಿಯಾದ 'ಒಲುಮೆ' ಇದನ್ನು ಪ್ರೇಮಗೀತೆಗಳ ಸಪ್ತಾಹ ಎಂದು ಕರೆಯಬಹುದು. ಸಂಸ್ಕೃತದಿಂದ ಕೆಲವು ಅನುವಾದಗಳು, ಉಳಿದವುಗಳು ಸ್ವತಂತ್ರ, ಗಂಡುಹೆಣ್ಣುಗಳ ಒಲವು ಹಗೆಗಳನ್ನು ಬಣ್ಣಿಸುವ ಕವನದ ಕೆಲವು ಸಾಲುಗಳನ್ನು ನೋಡಿದಾಗ ಅದೇ ರೀತಿ ತೀ.ನಂ.ಶ್ರೀಯವರು ಸಾತ್ವಿಕರು, ಶೀಲವಂತರು, ಪ್ರಾಮಾಣಿಕರು ಆದ ಹುಟ್ಟು ಬೋಧಕರೂ ಆಗಿದ್ದಾರೆ.

ಉನ್ನತ ಉದ್ಯೋಗದ ಸ್ಪರ್ಧಾಪರೀಕ್ಷೆಯಲ್ಲಿ ಉತ್ತೀರ್ಣರಾದರು. ಸರಕಾರದ ಮುಖ್ಯ ಕಾರ್ಯದರ್ಶಿಯಾಗಿ ಹುದ್ದೆಗೇರುವ ಸಂಭ್ರಮವಿದ್ದರೂ, ತಹಶೀಲ್ದಾರ್ ಹುದ್ದೆಯನ್ನು ತ್ಯಜಿಸಿ ವಿಶ್ವವಿದ್ಯಾಲಯದ ಉಪನ್ಯಾಸಕ ಹುದ್ದೆಗೆ ಬಂದು ಬಿಡುತ್ತಾರೆ. ತಮ್ಮ ಮಗನನ್ನು ರೆವಿನ್ಯೂ ಇಲಾಕೆಯಲ್ಲಿ ಬಿಡಬಾರದೆಂದು ಶಾನುಭೋಗರಾದ ಅವರ ತಂದೆಯವರು ತೀ.ನಂ.ಶ್ರೀಯವರನ್ನು ಉತ್ತಮ ರೀತಿಯಲ್ಲಿ ಸಾಕಿ ಬೆಳೆಸಿದರು. ತೀ.ನಂ.ಶ್ರೀಯವರು ಪ್ರಾಥಮಿಕ, ಪ್ರೌಢಶಾಲಾ ಹಾಗೂ ಇತರ ಭಾಷೆಗಳು ಇತ್ಯಾದಿ ಸಾಹಿತ್ಯದ ವ್ಯವಸಾಯದ ಪ್ರಾರಂಭದಲ್ಲಿ. ಅವರು ಕವಿತೆಗಳನ್ನು ರಚಿಸಿದರಾದರೂ ವಿದ್ವತ್ ಕ್ಷೇತ್ರ ಅವರನ್ನು ಬಾಚಿ ತನ್ನ ತೆಕ್ಕೆಯಲ್ಲಿ ಇಟ್ಟುಕೊಳ್ಳುತ್ತದೆ. ಅದರಿಂದಾಗಿಯೇ "ತೀ.ನಂ.ಶ್ರೀಯವರು ಉತ್ತಮ ವಿಮರ್ಶಕರು ಹಾಗೂ ಕವಿಗಳು ಆಗಿದ್ದಾರೆ. ಉದಾರ ಭಾವನೆ ಹೊಂದಿರುವ ತೀ.ನಂ.ಶ್ರೀಯವರು ಕನ್ನಡದ ಬೇರೆ ಗ್ರಂಥಗಳು ಹೊರಬರಲು ಕಾರಣವಾಯಿತು."[೧೦] ತೀ.ನಂ.ಶ್ರೀಯವರಲ್ಲಿದ್ದ ಕ್ರಮ, ಶಿಸ್ತು, ಅಚ್ಚುಕಟ್ಟು ಅವರ ಸಕಲ ಕವನಗಳಲ್ಲಿ ನಿರ್ದಿಷ್ಟ ಅಚ್ಚುಕಟ್ಟುತನ ಇರುತ್ತಿತ್ತು ಎಂದು ಹೇಳಬಹುದು.

ತೀ.ನಂ.ಶ್ರೀಯವರು ಉತ್ತಮ ಭಾಷಾ ಪ್ರಾಧ್ಯಾಪಕರಾಗಿದ್ದು ಜೊತೆಗೆ ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ನಡೆದು ಭಾಷಾ ವಿಜ್ಞಾನದ ಒಂದೂವರೆ ತಿಂಗಳ ಬೇಸಿಗೆಯ ರಜೆಯಲ್ಲಿ ಭಾಗವಹಿಸಿದ್ದು ಒಂದು ಬಹು ದೊಡ್ಡ ಮಾತು ಹಾಗೂ ಅನುಭವ ಎಂದು ಅವರ ಶಿಷ್ಯರಾದ ಎಂ.ಚಿದಾನಂದ ಮೂರ್ತಿಯವರು ಹೇಳುತ್ತಾರೆ. ತೀ.ನಂ.ಶ್ರೀಯವರು ಕನ್ನಡ ಗ್ರಂಥಸಂಪಾದನ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ಕೊಟ್ಟಿದ್ದಾರೆ. ತೀ.ನಂ.ಶ್ರೀಯವರು ಕೊಡುಗೆಗಳು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಉತ್ತಮ

ಪಾತ್ರವಹಿಸುತ್ತದೆ. ಅದರಲ್ಲಿಯೂ ಪ್ರಾಚೀನ ಗ್ರಂಥಗಳಾದ ರನ್ನಕವಿಯ ''ಗದಾಯುದ್ಧ ಸಂಗ್ರಹಂ'' ಹಾಗೂ ''ನಂಬಿಯಣ್ಣನ ರಗಳೆ''ಇತ್ಯಾದಿ ಕೃತಿಗಳನ್ನು ಅಚ್ಚುಕಟ್ಟಾಗಿ ಸಂಪಾದಿಸಿ ಕೊಟ್ಟಿದ್ದಾರೆ. ಅದರಲ್ಲಿಯೂ ತಾಳೆಗರಿಗಳನ್ನು ಸಂಗ್ರಹಿಸಿ ಅದಕ್ಕೆ ನಿರ್ದಿಷ್ಟವಾದ ಸಂಖ್ಯೆ ಕೊಟ್ಟು ಅದನ್ನು ವಿಂಗಡಿಸಿ ತದನಂತರ ಪರಿಷ್ಕರಿಸಿ ಅದರಲ್ಲಿಯ ಗದಾಯುದ್ಧ ಹಾಗೂ ನಂಬಿಯಣ್ಣನ ರಗಳೆಯು ಉತ್ತಮಕೃತಿಗಳು ಎಂದು ಪ್ರಶಂಸೆಗೆ ಪಾತ್ರವಾಗಿದೆ.

ಅದೇ ರೀತಿ ಜಾನಪದ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ತೀ.ನಂ.ಶ್ರೀಯವರು ಕೆರೆಗೆ ಹಾರ, ಹೆಣ್ಣುಮಕ್ಕಳ ಪದಗಳು ಎಂಬ ಕೃತಿಗಳನ್ನು ಸಂಪಾದಿಸಿ ಜಾನಪದ ಸಾಹಿತ್ಯಕ್ಕೆ ಉತ್ತಮ ಕೊಡುಗೆಗಳನ್ನು ಕೊಟ್ಟಿದ್ದಾರೆ. ಅದರಲ್ಲಿಯೂ ತೀ.ನಂ.ಶ್ರೀಯವರು ಅನೇಕ ಬಿಡಿಲೇಖನಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಅದರಲ್ಲಿ ಮುಖ್ಯವಾಗಿ 'ಎನಿತ್ತೆನಿತ್ತಂಬುಜ ಪತ್ರನೇತ್ರಯಾ' ಎಂಬ ಶಾಸನಪದ್ಯದ ಬಗ್ಗೆ ಹಾಗೂ ಭಾಷಾಶಾಸ್ತ್ರದ ಬಗ್ಗೆ ತುಂಬ ಒಲವುಳ್ಳವರಾಗಿ ತೀ.ನಂ.ಶ್ರೀಯವರು ಇದಕ್ಕೆ ಸಂಬಂಧಪಟ್ಟ ಹಾಗೆ ಕನ್ನಡದಲ್ಲಿ ಹೊಸ ಮಟ್ಟುಗಳಿರುವುದು ಹೊಸ ಛಂದಸ್ಸಿನ ಲಯಗಳು, ಮಾತ್ರೆ, ಮುಡಿ, ಪದ್ಮಗಣ, ಅಪೂರ್ವ ಷಟ್ಪದಿ ಲಕ್ಷಣ, ಕುದುರೆ, ಕರ್ನಾಟಕ ಎಂಬ ನಾಡಿನಲ್ಲಿ ಎಲ್ಲರೂ ಗೊಮ್ಮಟ ಶಬ್ದದ ನಿಷ್ಪತ್ತಿ. ಅದೇ ರೀತಿ ಆಕ್ಸ್‌ಫರ್ಡ್ ಇಂಗ್ಲೀಷ್ ಡಿಕ್ಷನರಿಯಲ್ಲಿ ಕೂಡ ಕಾರ್ಯಪ್ರವೃತ್ತರಾಗಿದ್ದರು ಎಂದು ಹೇಳಬಹುದು. ಇದರ ಜೊತೆಗೆ ಪುರಾಣಕ್ಕೆ ಸಂಬಂಧಪಟ್ಟಂತೆ ವಾಲ್ಮೀಕಿಯ ವರ್ಣನೆಗಳು , ನವರಸಗಳು. ಅಮರವಾಣಿ, ಪ್ರಯೋಗ ಚಿಂತಾಮಣಿ, ಅತ್ತಿಮಬ್ಬೆ, ಅಹಲ್ಯೆ ಸಮುದ್ರದಾಚೆಯಿಂದ, ಬೇಂದ್ರೆಯವರ ಗರಿ, ಸಖೀಗೀತ, ಈ ರೀತಿಯಾಗಿ ಕೊಟ್ಟ ಯಂಡ್ಕುರತ್ನ, ಸಮುದ್ರದ ನೀರು ಈ ರೀತಿಯಾಗಿ ಹತ್ತುಹಲವು ರೀತಿಯಲ್ಲಿ ಸಂಶೋಧನಾ ಲೇಖನಗಳನ್ನು ಬರೆದಿರುವುದಾಗಿ ನಮಗೆ ತಿಳಿದುಬರುತ್ತದೆ.

ಕನ್ನಡ ಸಾಹಿತ್ಯಕ್ಕೆ ಮಹಾಕವಿಯನ್ನು ಕೊಟ್ಟ ಕೀರ್ತಿ ಒಂದು ಶ್ಯಾನುಭೋಗರ ಕುಟುಂಬಕ್ಕೆ ಸಲ್ಲುತ್ತದೆ. ಇವರ ಭಾರತೀಯ ಕಾವ್ಯಮೀಮಾಂಸೆಯು ಪಂಪ ಪ್ರಶಸ್ತಿ ಪಡೆದುಕೊಂಡು ಅತ್ಯುತ್ತಮ ಕೃತಿ ಎನಿಸಿಕೊಂಡಿದೆ. ಅದಕ್ಕೆ ಅದನ್ನು ಆಚಾರ್ಯ ಕೃತಿಯೆಂದು ಕರೆಯುತ್ತಾರೆ. ಈ ಕೃತಿಗೆ ಮರಣೋತ್ತರ ಪಂಪ ಪ್ರಶಸ್ತಿ ಒದಗಿಬಂತು. ಭಾಷಾ ವಿಜ್ಞಾನದ ಬಗ್ಗೆ ಆಳವಾಗಿ ಅಧ್ಯಯನ ಮಾಡಿದ ತೀ.ನಂ.ಶ್ರೀಯವರನ್ನು ದೆಹಲಿಯ ಡೆಕ್ಕನ್ ಕಾಲೇಜಿನವರು ಸಂದರ್ಶನ ಪ್ರಾಧ್ಯಾಪಕರಾಗಿ ನೇಮಿಸಿಕೊಳ್ಳಲು ಮುಂದಾದರು.

ತೀ.ನಂ.ಶ್ರೀಯವರು ಗ್ರಂಥ ಸಂಪಾದನ ಶಾಸ್ತ್ರದ ಬಗ್ಗೆ ತಮ್ಮದೇ ಆದ ವಿಶ್ವಾಸವನ್ನು ಹೊಂದಿ ಅದನ್ನು ಒಂದು ಅಧ್ಯಯನದ ವಿಷಯವನ್ನಾಗಿ ಮಾಡಬೇಕೆಂದು ತೀರ್ಮಾನಿಸಿದರು. ಗ್ರಂಥಸಂಪಾದನ ಶಾಸ್ತ್ರವು ತೀ.ನಂ.ಶ್ರೀಯವರಿಂದಲೇ ಒಂದು ಅಚ್ಚುಕಟ್ಟುತನವನ್ನು ಪಡೆದುಕೊಂಡಿತು. ಒಂದು ಶಾಸ್ತ್ರ ಕೃತಿಯಾಗಿ ಪರಿಣಮಿಸಿತು. ಅದೇ ರೀತಿ ಭಾಷಶಾಸ್ತ್ರಕ್ಕೆ ತೀ.ನಂ.ಶ್ರೀಯವರ ಕೊಡುಗೆ ಅಮೂಲ್ಯವಾದುದು. ಅದರಲ್ಲಿ ಮುಡಿ, ಪದ್ಮಗಣ ಹೊಸರೀತಿಯ ಛಂದೋರೂಪಗಳನ್ನು ಪರಿಚಯಿಸಿಕೊಟ್ಟರು. ಹಾಗೂ ಅನೇಕ ವಿಮರ್ಶೆ ಕೃತಿಗಳನ್ನು ಪ್ರಕಟಿಸಿದರು ಎಂದು ಹೇಳಬಹುದು. ಅದರಲ್ಲಿ ಬೇಂದ್ರೆಯವರ ಸಖೀಗೀತ, ಕೆರೆಗೆ ಹಾರ ಇತ್ಯಾದಿಗಳ ಬಗ್ಗೆ ತೀ.ನಂ.ಶ್ರೀಯವರು ಬರೆದ ವಿಮರ್ಶೆ ಅತ್ಯುತ್ತಮವಾಗಿದೆ.

ತೀ.ನಂ.ಶ್ರೀಯವರು ಕನ್ನಡ ವಿದ್ವತ್ ಪರಂಪರೆಗೆ ಕೊಟ್ಟ ಕೊಡುಗೆ ಬಹಳ ಮುಖ್ಯವಾದವು. ಅದು ಅಲ್ಲದೆ ಗ್ರಂಥಸಂಪಾದನ ಶಾಸ್ತ್ರದಲ್ಲಿ ಪರಿಣಿತರಾದ ತೀ.ನಂ.ಶ್ರೀಯವರು ಕನ್ನಡ ಗ್ರಂಥಗಳಾದ ಗದಾಯುದ್ಧ, ನಂಬಿಯಣ್ಣನ ರಗಳೆ, ಅದೇ ರೀತಿ ಕೆರೆಗೆ ಹಾರ, ಇತ್ಯಾದಿ ಸಂಶೋಧನೆಯ ಗ್ರಂಥಗಳನ್ನು ಕಾಣಬಹುದಾಗಿದೆ. ತೀ.ನಂ.ಶ್ರೀಯವರು ಉತ್ತಮ ಭಾಷಣಕಾರರು, ಶಾಸನಶಾಸ್ತ್ರಜ್ಞರು, ಭಾಷಾ ಶಾಸ್ತ್ರಜ್ಞರು, ಅದೇ ರೀತಿ ಜನಪದವನ್ನು ಕುರಿತಾದ ಕೆಲವು ವಿಚಾರಗಳು ಅವರಿಗೆ ತಿಳಿದಿತ್ತು. ಅದು ಅಲ್ಲದೆ ಅದರಲ್ಲಿ ಪರಿಣತಿ ಹೊಂದಿದ್ದರು. ಈ ರೀತಿಯಲ್ಲಿ ತೀ.ನಂ.ಶ್ರೀಯವರು ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಗಳನ್ನು ಸಲ್ಲಿಸಿದ್ದಾರೆ.

## ಅಡಿಟಿಪ್ಪಣಿಗಳು

೧. ತೀ.ಶ್ರೀ.ನಾಗಭೂಷಣ : 'ತೀ.ನಂ.ಶ್ರೀ' ಪಥ, ಪರಿಸರ, ಇಳಾಮುದ್ರಣ, ಪು.ಸಂ. ೫೧೯, ಬೆಂಗಳೂರು ೨೦೦೬.

೨. ತೀ.ಶ್ರೀ. ನಾಗಭೂಷಣ : 'ತೀ.ನಂ.ಶ್ರೀ' ಪಥ, ಪರಿಸರ, ಇಳಾಮುದ್ರಣ, ಪು.ಸಂ. ೩.೨೧, ಬೆಂಗಳೂರು ೨೦೦೬.

೩. ಪ್ರೊ. ಎಚ್.ಜಿ. ಸಣ್ಣಗುಡ್ಡಯ್ಯ : ತೀ.ನಂ.ಶ್ರೀಕಂಠಯ್ಯ, ಅಕ್ಷಯ ಪ್ರಕಾಶನ, ಪು.ಸಂ. ೨೩, ತುಮಕೂರು - ೨೦೦೪.

೪. ತೀ.ಶ್ರೀ. ನಾಗಭೂಷಣ : 'ತೀ.ನಂ.ಶ್ರೀ' ಪಥ, ಪರಿಸರ, ಇಳಾಮುದ್ರಣ, ಪು.ಸಂ. ೩೯೨, ಬೆಂಗಳೂರು ೨೦೦೬.

೫. ತೀ.ಶ್ರೀ. ನಾಗಭೂಷಣ : 'ತೀ.ನಂ.ಶ್ರೀ' ಪಥ, ಪರಿಸರ, ಇಳಾಮುದ್ರಣ, ಪು.ಸಂ. ೩೯೨, ಬೆಂಗಳೂರು ೨೦೦೬.

೬. ತೀ.ಶ್ರೀ. ನಾಗಭೂಷಣ : 'ತೀ.ನಂ.ಶ್ರೀ' ಪಥ, ಪರಿಸರ, ಇಳಾಮುದ್ರಣ, ಪು.ಸಂ. ೨೬, ಬೆಂಗಳೂರು ೨೦೦೬.

೭. ಡಾ. ಎಸ್. ವಿದ್ಯಾಶಂಕರ : 'ಸಮಾಹಿತ' ಪ್ರಿಯದರ್ಶಿನಿ ಪ್ರಕಾಶನ, ಪು.ಸಂ. ೨೬, ಬೆಂಗಳೂರು ೨೦೦೬

೮. ಡಾ. ಸಂಗಮೇಶ ಸವದತ್ತಿಮಠ : 'ಕನ್ನಡ ಸಾಹಿತ್ಯ ಸಂಶೋಧನೆಯ ಇತಿಹಾಸ' ಕನ್ನಡ ಪುಸ್ತಕ ಪ್ರಾಧಿಕಾರ, ಪು.ಸಂ. ೩೮, ಬೆಂಗಳೂರು ೨೦೦೩.

೯. ತೀ.ಶ್ರೀ ನಾಗಭೂಷಣ : 'ತೀ.ನಂ.ಶ್ರೀ' ಪಥ ಪರಿಸರ' ಇಳಾಮುದ್ರಣ, ಪು.ಸಂ. ೫೧೯. ಬೆಂಗಳೂರು ೨೦೦೬

೧೦. ಪ್ರೊ॥ ದೇ.ಜ.ಗೌ : 'ಶ್ರೀಕಂಠದರ್ಶನ' ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಪು.ಸಂ. ೪೩. ಮೈಸೂರು ೨೦೦೬.

# ಅಧ್ಯಾಯ - ೩

# ತೀ.ನಂ.ಶ್ರೀಯವರ ಸಂಪಾದಿತ ಗ್ರಂಥಗಳು

# ಅಧ್ಯಾಯ - 3

## ತೀ.ನಂ.ಶ್ರೀಯವರ ಸಂಪಾದಿತ ಗ್ರಂಥಗಳು

ಈ ಮೂರನೇ ಅಧ್ಯಾಯದಲ್ಲಿ ಈ ಕೆಳಕಂಡಂತೆ ಉಪವಿಭಾಗಗಳನ್ನು ಮಾಡಿಕೊಂಡಿದ್ದೇನೆ. ಅದು ತೀ.ನಂ.ಶ್ರೀಯವರು ಸಂಪಾದಿಸಿರುವ ಕೃತಿಗಳ ಹಿನ್ನಲೆಯಲ್ಲಿ ಆ ಕೃತಿಗಳು ಈ ಕೆಳಕಂಡಂತೆ ಇದೆ.

1. ರನ್ನ ಕವಿಯ ಗದಾಯುದ್ಧ ಸಂಗ್ರಹಂ
2. ಹರಿಹರ ಕವಿಯ ನಂಬಿಯಣ್ಣನ ರಗಳೆ

ತೀ.ನಂ.ಶ್ರೀಯವರು ಸಂಪಾದಿಸಿರುವ ಮೊದಲ ಪ್ರಾಚೀನ ಕೃತಿ ನಂಬಿಯಣ್ಣನ ರಗಳೆ ಹರಿಹರನ ಅತ್ಯುತ್ಕೃಷ್ಟ ಕೃತಿಗಳಲ್ಲಿ ಒಂದಾದ ಇದನ್ನು ಮೊಟ್ಟಮೊದಲು ಸಂಪಾದಿಸಿ ಪ್ರಕಟಿಸಿದ ಕೀರ್ತಿ ತೀ.ನಂ.ಶ್ರೀಯವರಿಗೆ ಸಲ್ಲುತ್ತದೆ. ಈ ಕೃತಿಗೆ ಅಂದರೆ ''ಈ ಗ್ರಂಥವನ್ನು ಸಂಪಾದಿಸಲು ಸ್ಫೂರ್ತಿ ಮುಖ್ಯವಾಗಿ ಅವರ ಗುರುಗಳಾದ ಪ್ರೊ. ಟಿ.ಎಸ್. ವೆಂಕಣ್ಣಯ್ಯನವರು ಎಂದು ಹೇಳಿಕೊಂಡಿದ್ದಾರೆ.''[1]

ಏಕೆಂದರೆ ವೆಂಕಣ್ಣಯ್ಯನವರು ಹರಿಹರನ ಇನ್ನೊಂದು ಕೃತಿಯಾದ ಬಸವದೇವರಾಜ ರಗಳೆಯನ್ನು ಸಂಪಾದಿಸುವಾಗ ತೀ.ನಂ.ಶ್ರೀಯವರು ಅದಕ್ಕೆ ಸಹಾಯಕರಾಗಿ ದುಡಿದವರು. ಈ ರೀತಿಯಾದ ದುಡಿಮೆಯೇ ನಂಬಿಯಣ್ಣನ ರಗಳೆ ಎಂಬ ಕೃತಿಯನ್ನು ಸಂಪಾದಿಸಲು ಮೂಲ ಕಾರಣವಾಯಿತು. ಕೊನೆಗೆ ಈ ಕೃತಿಯನ್ನು ಅಚ್ಚುಕಟ್ಟಾಗಿ ಸಂಪಾದಿಸಿ ತಮ್ಮ ಪ್ರೀತಿಯ ಗುರುಗಳಾದ ಟಿ.ಎಸ್. ವೆಂಕಣ್ಣಯ್ಯನವರಿಗೆ ಅರ್ಪಿಸಿದ್ದಾರೆ ಎಂದೂ ಇದರಿಂದ ನಮಗೆ ತಿಳಿದುಬರುತ್ತದೆ. ತೀ.ನಂ.ಶ್ರೀಯವರು ಗುರುಪ್ರೇಮಿಗಳು ಎಂದು ಈ ಗ್ರಂಥಕ್ಕೆ ಪೂರಕವಾಗಿ ಇನ್ನೊಂದು ಸಂಪುಟದಲ್ಲಿ ಸಂಪಾದನ ಕಾರ್ಯದ ಸಮಸ್ಯೆಗಳು, ಇತರ ಭಾಷೆಗಳಲ್ಲಿ ದೊರೆಯುವ ಕೆಲವು ವೃತ್ತಾಂತಗಳು, ನಂಬಿಯಣ್ಣನ ರಗಳೆಯ ಕಾವ್ಯದ ವಿಮರ್ಶೆ ಮುಂತಾದವುಗಳನ್ನು ಒಳಗೊಂಡ ವಿಸ್ತಾರವಾದ ಪೀಠಿಕೆ ಮತ್ತು ಟಿಪ್ಪಣಿಗಳನ್ನು ಪ್ರಕಟಿಸುವ ಉದ್ದೇಶ ಹೊಂದಿದ್ದರು.

ತೀ.ನಂ.ಶ್ರೀಯವರ ಮತ್ತೊಂದು ಸಂಪಾದಿತ ಕೃತಿ ರನ್ನ ಕವಿಯ ಗದಾಯುದ್ಧ ಸಂಗ್ರಹಂ ಇನ್ನೊಂದು ವಿದ್ವತ್ಪೂರ್ಣ ಕೃತಿ. ಈ ಕೃತಿಯನ್ನು ತೀ.ನಂ. ಶ್ರೀಯವರು

ಮತ್ತೊಬ್ಬ ಗುರುಗಳಿಂದ ಪ್ರೇರಣೆ ಪಡೆದು ಬರೆದದ್ದು ಎಂದು ಕೊಳ್ಳಬಹುದು. ಮೂಲತಃ ಈ ಕೃತಿಯ ಕರ್ತೃವಾದ ಪ್ರಾಚೀನ ಕವಿ ರನ್ನ ತನ್ನ ಕೃತಿಯಾದ ಗದಾಯುದ್ಧ ಅಥವಾ ಸಾಹಸಭೀಮವಿಜಯ ಕೃತಿಯಲ್ಲಿ ನಾಟಕೀಯ ಅಂಶಗಳನ್ನು ಹೆಚ್ಚಿನದಾಗಿ ತೋರ್ಪಡಿಸಿದ್ದಾನೆ. ಈ ನಾಟಕೀಯತೆಯು-ತೀ.ನಂ.ಶ್ರೀಯವರ ಗುರುಗಳಾದ ಬಿ.ಎಂ. ಶ್ರೀಯವರ ಮೇಲೆ ಹೆಚ್ಚಿನ ಪ್ರಭಾವ ಬೀರಿತು. ಈ ಪ್ರಭಾವದಿಂದಲೇ ಬಿ.ಎಂ.ಶ್ರೀ.ಯವರ ಶಿಷ್ಯರಾದ ತೀ.ನಂ.ಶ್ರೀಯವರು ಪ್ರಾಚೀನ ಕೃತಿಯಾದ ಗದಾಯುದ್ಧ ಕಾವ್ಯವನ್ನು ಸಂಗ್ರಹ ಮಾಡಿದ್ದು ಎಂದು ಕೊಳ್ಳಬಹುದಾಗಿದೆ.

ಕೊನೆಗೆ ಈ ಕೃತಿಯನ್ನು ಸಂಪಾದಿಸಿ ತೀ.ನಂ.ಶ್ರೀಯವರು ತಮ್ಮ ಗುರುಗಳಾದ ಬಿ.ಎಂ.ಶ್ರೀಕಂಠಯ್ಯನವರಿಗೆ ಅರ್ಪಣೆ ಮಾಡಿದ್ದಾರೆ. ಈ ಕೃತಿಯನ್ನು ಮೊದಲು ಎಂ.ಎ. ರಾಮಾನುಜ ಐಯ್ಯಂಗಾರ್ಯರುಸಂಪಾದನೆ ಮಾಡಿದರು. ತದನಂತರ ತೀ.ನಂ.ಶ್ರೀಯವರು ಈ ಕೃತಿಯನ್ನು ಇನ್ನು ಸೂಕ್ಷ್ಮವಾಗಿ ಸಂಗ್ರಹಗೊಳಿಸಿ ಸಂಪಾದಿಸಿ ಪ್ರಕಟಿಸಿದರು. "ರನ್ನನ ಈ ಕೃತಿಯ ಮೇಲೆ ಸಂಸ್ಕೃತ ಕವಿಯಾದ ಭಟ್ಟನಾರಾಯಣ ವೇಣೀಸಂಸಾರ ಕೃತಿಯ ಪ್ರಭಾವವಿದೆ" ಎಂದು ಎಂ.ಎ. ರಾಮಾನುಜ ಐಯ್ಯಂಗಾರರು ತಿಳಿಸುತ್ತಾರೆ . ರನ್ನನು ಗದಾಯುದ್ಧದ ನಾಟಕೀಯತೆಯನ್ನು ಪಂಪಭಾರತದ ಹದಿಮೂರನೇಯ ಆಶ್ವಾಸನೆ ತಳಹದಿಯ ಮೇಲೆಯೇ ಕಟ್ಟಿದ್ದಾನೆಂದು ಹೇಳಬಹುದು. ರನ್ನನು ಸಾಧಾರಣವಾಗಿ ಪಂಪ ಹಾಕಿಕೊಟ್ಟ ದಾರಿಯಲ್ಲೇ ಮುಂದುವರಿದಿದ್ದಾನೆನ್ನುವುದು ಸತ್ಯದ ಸಂಗತಿಯಾಗಿದೆ. ಗದಾಯುದ್ಧದ ಕಥಾಭಾಗವು ಸ್ವಲ್ಪ ಅದರಲ್ಲಿ ಮುಕ್ಕಾಲು ಪಾಲೆಲ್ಲಾ ಮಹಾಭಾರತದಲ್ಲಿ ಇಲ್ಲವೆಂದೇ ಹೇಳಬೇಕು.

ಒಟ್ಟಾರೆ ತೀ.ನಂ.ಶ್ರೀಯವರು ಉತ್ತಮ ಎರಡು ಪ್ರಾಚೀನ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ ಎಂದು ಹೇಳಬಹುದು. ಅವುಗಳಲ್ಲಿ ಮೊದಲನೆಯದು ನಂಬಿಯಣ್ಣನ ರಗಳೆ.

**ನಂಬಿಯಣ್ಣನ ರಗಳೆ (೧೯೪೬)**

ಶ್ರೀಕಂಠಯ್ಯನವರು ತಮ್ಮ ವಿದ್ವತ್ ಮತ್ತು ಗ್ರಂಥಸಂಪಾದನ ಶಾಸ್ತ್ರದ ಜ್ಞಾನಗಳನ್ನು ಧಾರೆ ಎರೆದು ಸಂಪಾದಿಸಿದ ಪ್ರಾಚೀನ ಕನ್ನಡ ಕಾವ್ಯ ಇದು. ಹರಿಹರ ಶ್ರೇಷ್ಠ ಕೃತಿಗಳಲ್ಲಿ ನಂಬಿಯಣ್ಣನ ರಗಳೆಯು ಒಂದಾಗಿದೆ. ಇದನ್ನುಸಂಪಾದಿಸಿ ಪ್ರಕಟಿಸಿದ ಕೀರ್ತಿ ತೀ.ನಂ.ಶ್ರೀಯವರಿಗೆ ಸಲ್ಲುತ್ತದೆ.

ಮೊಟ್ಟಮೊದಲು ಸಂಪಾದಿಸಿದ ಐದು ಓಲೆ ಮತ್ತು ಕಾಗದದ ಹಸ್ತಪ್ರತಿಗಳನ್ನು ಉಪಯೋಗಿಸಿಕೊಂಡು ವಿಶೇಷ ಪರಿಶ್ರಮದಿಂದ ಸಂಪಾದಿಸಿದ ಈ ಅಪರೂಪದ ಗ್ರಂಥವಾಗಿದೆ. ಈ ಕೃತಿಯನ್ನು ಸಂಪಾದಿಸಲು ಮುಖ್ಯ ಕಾರಣರು ಯಾರೆಂದರೆ ಪ್ರೊ. ಟಿ.ಎಸ್. ವೆಂಕಣ್ಣಯ್ಯನವರು ಎಂದು ಹೇಳಬಹುದಾಗಿದೆ. ಏಕೆಂದರೆ ''ವೆಂಕಣ್ಣಯ್ಯನವರು ಬಸವರಾಜ ದೇವರ ರಗಳೆಯನ್ನು ಸಂಪಾದಿಸುವ ಕಾರ್ಯದಲ್ಲಿ ತೊಡಗಿದ್ದಾಗ ತೀ.ನಂ.ಶ್ರೀಯವರು ಅವರ ಶಿಷ್ಯರಾಗಿದ್ದು ಅವರಿಗೆ ಸಹಕರಿಸಿದ್ದು''[3] ಬಹಳ ಮುಖ್ಯವಾದುದು ಎಂದು ಹೇಳಬಹುದು. ಗುರುಗಳ ಸಂಪಾದನ ರೀತಿ, ನೀತಿಗಳನ್ನೇ ಮುಂದುವರಿಸಿಕೊಂಡು ಬಂದ ತೀ.ನಂ.ಶ್ರೀ.ಯವರು ಮುಂದೆ ಹರಿಹರನ ಇನ್ನೊಂದು ಕೃತಿಯಾದ ನಂಬಿಯಣ್ಣನ ರಗಳೆ ಯನ್ನು ಒಂದು ಅಚ್ಚುಕಟ್ಟಿನ ರೀತಿಯಲ್ಲಿ ಸಂಪಾದಿಸಿ ಪ್ರಕಟಿಸಿದರು. ಈಕೃತಿಯ ಜೊತೆಗೆ ಇದಕ್ಕೆ ಸಂಬಂಧಪಟ್ಟ ಕವಿಯ ಕಾಲ, ಸ್ಥಳ, ಹಾಗೂ ರಚನೆ. ಅದೇ ರೀತಿ ಹರಿಹರನ ರಗಳೆಗಳನ್ನು ಕುರಿತಾದ ಕೆಲವು ಮಾಹಿತಿಗಳನ್ನು ವ್ಯಕ್ತಪಡಿಸಿದ್ದಾರೆ. ಮುಂದೆ ನಂಬಿಯಣ್ಣನ ರಗಳೆಯನ್ನು ತೀ.ನಂ.ಶ್ರೀಯವರು ಸಂಪಾದಿಸಿದ ರೀತಿ ನೀತಿಗಳನ್ನು ಕುರಿತಾದ ಚಿಂತನೆ ಮಾಡಲಾಗಿದೆ.

ತೀ.ನಂ.ಶ್ರೀಯವರು ನಂಬಿಯಣ್ಣನ ರಗಳೆಯನ್ನು ಸಂಪಾದಿಸಿದ ಕಾರ್ಯ ವೈಖರಿಯನ್ನು ಕುರಿತು ಈ ಕೆಳಗಿನಂತೆ ತಿಳಿದುಕೊಳ್ಳಬಹುದಾಗಿದೆ. ಮೂಲತಃ ಸಿದ್ಧಪಡಿಸಿದ ನಂಬಿಯಣ್ಣನ ರಗಳೆಯು ಅಚ್ಚುಮನೆಯ ಪ್ರತಿ ಹಾಗೂ ಓಲೆಯ ಪ್ರತಿಗಳಿಂದ ಪಾಠಾಂತರಗಳನ್ನು ಸಂಕಲನ ಮಾಡಿದ್ದ ಆಧಾರ ಹಸ್ತಪ್ರತಿ. ಇವೆರಡರಿಂದ ಈ ಕೆಲಸಕ್ಕೆ ಪರಿಶ್ರಮದ ಒಂದುಸ್ಥಬ್ಧ ಚಿತ್ರ ಲಭ್ಯವಾಗುತ್ತದೆ.

''ಈ ಕೃತಿಯ ಸಂಪಾದನೆಗೆ ಅವರು ಒಟ್ಟು ಐದು ಹಸ್ತಪ್ರತಿಗಳನ್ನು ಬಳಸಿಕೊಂಡಿದ್ದಾರೆ. ಆ ಐದು ಹಸ್ತಪ್ರತಿಗಳು ಯಾವುವೆಂದರೆ ಕ.ಖ.ಗ.ಚ.ಜ. ಎಂಬ ಪ್ರತಿಗಳು ಮತ್ತು ಅವುಗಳ ಪರಸ್ಪರ ಸಂಬಂಧ ಹಾಗೂ ಅವುಗಳ ಪೀಳಿಗೆ ರಚನೆಯನ್ನು ಮಾಡಿದ್ದಾರೆ. ಅದರಲ್ಲಿ ಐದುಹಸ್ತಪ್ರತಿಗಳಲ್ಲಿ ತೋರುವ ಬೇಧವನ್ನು ಗುರುತಿಸಿದ್ದಾರೆ.''[೪] ಅವುಗಳಲ್ಲಿ ಯಾವುದು ಉತ್ತಮ ಎಂಬುದನ್ನು ತೀ.ನಂ.ಶ್ರೀಯವರು ನಿರ್ಧರಿಸುತ್ತಾರೆ.

ಈ ಹಸ್ತಪ್ರತಿಗಳಲ್ಲಿ ಕ.ಜ.ಗಳ ಹಸ್ತಪ್ರತಿಯಲ್ಲಿ ಪಾಠ ಸಂಪ್ರದಾಯವು ಖ.ಗ.ಚ.ಗಳ ಪಾಠ ಸಂಪ್ರದಾಯವೂ ಕೆಲಮಟ್ಟಿಗೆ ಭಿನ್ನವಾಗಿದೆ. ಕ.ಜ.ಗಳ ಹಸ್ತಪ್ರತಿಯಲ್ಲಿ ಮೂಡಿಬಂದಿರುವ ಸಂಪ್ರದಾಯವು ಮೂಲಕ್ಕೆ ಹೆಚ್ಚು ಹತ್ತಿರವೆಂದು ಪರಿಶೀಲನೆಯಿಂದ ವ್ಯಕ್ತವಾಗುತ್ತದೆ. ಖ.ಗ.ಚ.ಗಳ ಗುಂಪಿನಲ್ಲಿ ಖ.ಗ.ಗಳು

ಒಂದಕ್ಕೊಂದು ಬಲುಮಟ್ಟಿಗೆ ಹೊಂದಿಕೊಳ್ಳುತ್ತದೆ. ಆದರೆ ಚ ಪ್ರತಿಯೇ ಇವುಗಳಿಂದ ಬೇರೆ ನಿಲ್ಲುತ್ತದೆ. ಖ.ಗ ಹಸ್ತಪ್ರತಿಗಳಲ್ಲಿ ಅನೇಕ ಪ್ರಕ್ಷಿಪ್ತ ಭಾಗಗಳಿರುವುದನ್ನು ತೀ.ನಂ.ಶ್ರೀಯವರು ಪತ್ತೆ ಹಚ್ಚಿ ಅನೇಕ ತಿದ್ದುಪಡಿಗಳನ್ನು ಮಾಡಿದ್ದಾರೆ. ಈ ರೀತಿಯಾದ ಅಧ್ಯಯನ ಪರಿಶ್ರಮವನ್ನು ನಾವು ತೀ.ನಂ.ಶ್ರೀಯರಲ್ಲಿ ಕಾಣಬಹುದಾಗಿದೆ. ಈ ಸಂಪಾದನ ಕಾರ್ಯವೂ ಬಹಳ ಸೂಕ್ಷ್ಮವಾಗಿ ಗಾಢವಾಗಿ ಮುಂದುವರಿದಿರುವುದನ್ನು ಕಾಣಬಹುದಾಗಿದೆ. ಕೊನೆಗೆ ಐದು ಹಸ್ತಪ್ರತಿಗಳಲ್ಲಿ ತೀ.ನಂ.ಶ್ರೀಯವರು 'ಕ' ಪ್ರತಿಯನ್ನು ಕವಿ ಪಾಠಕ್ಕೆ ಹತ್ತಿರವೆಂದು ನಿರ್ಧರಿಸಿ, ಅದನ್ನು ಆಧಾರಪ್ರತಿಯಾಗಿ ಇಟ್ಟುಕೊಂಡು ಉಳಿದ ಪ್ರತಿಗಳಲ್ಲಿ ಮುಖ್ಯ ಪಾಠಬೇಧಗಳನ್ನು ಮಸಿ ಅಥವಾ ಬಣ್ಣದ ಪೆನ್ಸಿಲು, ಮುಂತಾದ ಬೇರೆ ಬೇರೆ ಲೇಖನ ಸಾಧನಗಳಿಂದ ಪ್ರತಿಪ್ರತಿಯ ಮೇಲ್ಭಾಗದಲ್ಲಿ ಗುರುತಿಸಿದ್ದಾರೆ. ಹರಿಹರನ ಅತ್ಯುತ್ಕೃಷ್ಟ ಕೃತಿಗಳಲ್ಲಿ ಒಂದಾದ "ನಂಬಿಯಣ್ಣ ರಗಳೆ ಯನ್ನು ಐದು ಓಲೆ (ಕ.ಖ.ಗ.ಚ.ಜ) ಮತ್ತು ಅದಕ್ಕೆ ಸಂಬಂಧಪಟ್ಟ ಕಾಗದದ ಹಸ್ತಪ್ರತಿಗಳನ್ನು ಉಪಯೋಗಿಸಿ ಸಂಪಾದಿಸಿದ್ದು" ಎಂದು ತೀ.ನಂ.ಶ್ರೀಯವರ ಹತ್ತಿರ ಶಿಷ್ಯರಾದ ಪ್ರೊ. ಎಚ್.ಜಿ.ಸಣ್ಣಗುಡ್ಡಯ್ಯ ಈ ಮಾತನ್ನು ಹೇಳುತ್ತಾರೆ.

"ಈ ಕೃತಿಯ ಬಗ್ಗೆ ತೀ.ನಂ.ಶ್ರೀಯವರು ಕೈ ಹಾಕುವವರೆಗೂ ಹರಿಹರನ ನಂಬಿಯಣ್ಣನ ರಗಳೆ ಪ್ರಕಟವಾಗಿರಲೇ ಇಲ್ಲ. ಇದರ ಬಗ್ಗೆ ಕಾಳಜಿ ವಹಿಸಿ ತೀ.ನಂ.ಶ್ರೀಯವರು ಈ ಕೃತಿಯನ್ನು ಸಂಪಾದಿಸಿ ಕೊಟ್ಟರು. ಇದಕ್ಕೆ ಮುಖ್ಯ ಕಾರಣ ಹರಿಹರಕವಿಯ ಮೇಲಿರುವ ದೃಢವಾದ ಭಕ್ತಿ", ಎಂದು ಈ ಮಾತನ್ನು ಎಂ.ಚಿದಾನಂದಮೂರ್ತಿಯವರು ಮಣಿಹ ಎಂಬ ಗ್ರಂಥದಲ್ಲಿ ಗ್ರಂಥಸಂಪಾದನೆಗೆ ತೀ.ನಂ.ಶ್ರೀಯವರ ಹಾಗೂ ಡಿ.ಎಲ್.ಎನ್.ಕೊಡುಗೆ ಎಂಬ ಲೇಖನದಲ್ಲಿ ಹೇಳಿದ್ದಾರೆ.

ಈ ಕೃತಿಯ ಬಗ್ಗೆ ಹಲವಾರು ವಿಮರ್ಶೆಗಳು ಬಂದಿದೆ. ಈ ನಂಬಿಯಣ್ಣನ ರಗಳೆಗೆ ಸಂಬಂಧಪಟ್ಟಂತೆ ಹಲವಾರು ಚರ್ಚೆಗಳು ಆಗಿವೆಎಂದು ಹೇಳಬಹುದು. ಹರಿಹರನ ರಗಳೆಗಳಲ್ಲಿ ಬಸವರಾಜ ದೇವರ ರಗಳೆ ಮತ್ತು ನಂಬಿಯಣ್ಣನ ರಗಳೆ ಬಹಳ ದೀರ್ಘವಾದುವು. ಹಾಗೂ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರಮುಖವಾದವು. ಇದರ ಸಂಪಾದನೆಯು ಕೂಡ ದೀರ್ಘ ಪರಿಶ್ರಮದಿಂದ ಮೂಡಿಬಂದಿದೆ ಎಂದು ಹೇಳಬಹುದು. ನಂಬಿಯಣ್ಣನ ರಗಳೆ ಹತ್ತೊಂಬತ್ತು ಸ್ಥಬ್ಧಗಳುಳ್ಳ ಸಮಗ್ರ ಕೃತಿಯಲ್ಲಿ ಕಂಡುಬರುವ ಮುಖ್ಯ ಅಂಶಗಳೆಂದರೆ ಭಕ್ತಿ ಆಚರಣೆ, ಶಿವೋಪಾಸನೆ ಇತ್ಯಾದಿ ಅಂದರೆ ನಂಬಿಯಣ್ಣ ಮೂಲತಃ ಶಿವಭಕ್ತನಾಗಿದ್ದು ಪವಾಡ ಪುರುಷನಾಗಿರುತ್ತಾನೆ. ಈತನ ಕಥೆಯನ್ನೇ ತೀ.ನಂ.ಶ್ರೀಯವರು ಸಂಪಾದಿಸಿ ಪ್ರಕಟಿಸಿದ್ದಾರೆ.

ಅದೇ ರೀತಿ ಹರಿಹರನ ಕಥನ ಕಲೆ ಮುಖ್ಯವಾಗಿ ಶಿವಶರಣರ ಕಥೆಯನ್ನೇ ತನ್ನ ಕಾವ್ಯದ ವಸ್ತುವಾಗಿ ಆರಿಸಿಕೊಂಡಿದ್ದಾನೆ. ''ಹರಿಹರನು ಆರಿಸಿಕೊಂಡಿರುವ ಭಕ್ತರುಗಳಲ್ಲಿ ಪುರಾತನರಿದ್ದಾರೆ. ಹಾಗೂ ನೂತನರಿದ್ದಾರೆ. ಕನ್ನಡ ನಾಡು, ತಮಿಳುನಾಡು ಹಾಗೂ ಕಾಶ್ಮೀರದಂತಹ ದೂರ ದೇಶದವರು ಇದ್ದಾರೆ. ಬ್ರಾಹ್ಮಣ ಮೊದಲಾದ ಅಂತ್ಯಜರೂ ಇವನ ಕಾವ್ಯ ನಾಯಕನಾಗಿದ್ದಾರೆ. ಜೊತೆಗೆ ನಂಬಿಯಣ್ಣನ ರಗಳೆಯಲ್ಲಿ ಹರಿಹರನ ಇಷ್ಟದೈವವಾದ ಹಂಪೆಯ ವಿರೂಪಾಕ್ಷನನ್ನು ಕುರಿತು ಪ್ರಸ್ತಾಪಿಸಿರುತ್ತಾನೆ.''[೭]

ಹರಿಹರ ತನ್ನದೇ ಆದ ಶೈಲಿಯನ್ನು ತನ್ನ ಕಾವ್ಯದಲ್ಲಿ ಮೆರೆದಿದ್ದಾನೆ. ತಮಿಳುನಿಂದ ವಸ್ತುವನ್ನು ಆರಿಸಿಕೊಂಡ ಈ ಕವಿ ತೆಲುಗು, ತಮಿಳು ಶಬ್ದಗಳನ್ನು ಬಳಸಿಕೊಂಡಿದ್ದಾನೆ. ಉದಾ. ಪಿಚ್ಚು, ಪೆರುಮಾಳೆ, ತಿರುನಾಳ್ ಇತ್ಯಾದಿ ಪದಗಳು ರಗಳೆಯಲ್ಲಿ ಸಿಗುತ್ತವೆ. ಇವನ ಶೈಲಿಯಲ್ಲಿ ಮುಖ್ಯ ಗುಣ ಉತ್ಸಾಹ, ಆತನು ಈ ನಂಬಿಯಣ್ಣನ ರಗಳೆಯನ್ನು ಕಟ್ಟಿರುವುದು ಲಲಿತರಗಳೆಯಲ್ಲಿ ಈ ಲಲಿತರಗಳೆಯು ಕಾವ್ಯಕ್ಕೆ ಒಂದು ರೀತಿಯಾದ ಸೌಂದರ್ಯವನ್ನು ಹೆಚ್ಚಿಸುತ್ತದೆ.

ಈ ರೀತಿಯಾಗಿ ತೀ.ನಂ.ಶ್ರೀಯವರು ಉತ್ತಮ ಪಂಡಿತರಾದ್ದರಿಂದ ಹರಿಹರನ ಕೃತಿಗಳನ್ನು ಕುರಿತಾದ ಆಸಕ್ತಿ ಇರುವುದರಿಂದ ನಂಬಿಯಣ್ಣನ ರಗಳೆಯನ್ನು ಸಂಪಾದನೆ ಮಾಡಲು ಮುಂದಾದರು. ಈ ಕೃತಿಯನ್ನು ಅಚ್ಚುಕಟ್ಟಾಗಿ ಪ್ರಕಟಿಸಿದ ಕೀರ್ತಿ ತೀ.ನಂ.ಶ್ರೀಯವರಿಗೆ ಸಲ್ಲುತ್ತದೆ. ಕೊನೆಗೆ ಈ ಕೃತಿಯನ್ನು ಗುರುಗಳಾದ ಟಿ.ಎಸ್. ವೆಂಕಣ್ಣನಯ್ಯನವರಿಗೆ ಅರ್ಪಿಸಿದ್ದಾರೆ ಎಂದು ಹೇಳಬಹುದು. ಸುಮಾರು ಕ್ರಿ.ಶ. ೧೨೬೦ರಲ್ಲಿ ಆದರೆ ಕವಿಯಿರುವ ಬಗ್ಗೆ ಪರಿಚಯ ಸಿಗುವುದಿಲ್ಲ. ಹರಿಹರ ಹೊಯ್ಸಳರ ರಾಜ ಎರಡನೇ ವೀರಬಲ್ಲಾಳನ ಕಾಲದಲ್ಲಿದ್ದನೆಂದು ತಿಳಿದುಬರುತ್ತದೆ. ತೀ.ನಂ.ಶ್ರೀ. ಯವರು ಕವಿಯ ಕಾಲದ ಬಗ್ಗೆ ಸರಿಯಾದ ಮಾಹಿತಿ ಒದಗಿಸಿಲ್ಲ. ಏಕೆಂದರೆ ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯವಿಲ್ಲ.

ಆದರೆ ಕವಿಯ ಕೃತಿಯಾದ ನಂಬಿಯಣ್ಣನ ರಗಳೆಯ ಬಗ್ಗೆ ಮಾಹಿತಿಯನ್ನು ಒದಗಿಸುತ್ತಾರೆ ಎಂದು ಹೇಳಬಹುದು. ಈ ಕೃತಿಯ ಸಂಪಾದನೆಗಾಗಿ ತೀ.ನಂ.ಶ್ರೀಯವರು ಪಟ್ಟಶ್ರಮದ ಬಗ್ಗೆ ಒಂದು ಇಣಕು ನೋಟ ಕೆಲವು ಟಿಪ್ಪಣಿಗಳಲ್ಲಿ ದೊರಕುತ್ತದೆ. ಕವಿ ಹೃದಯದ ಪರಿಚಯ ಪಡೆಯಲು ತಮಗೆ ದೊರೆತ ಎಲ್ಲ ಹರಿಹರನ ರಗಳೆಗಳನ್ನು ವ್ಯಾಸಂಗ ಮಾಡಿರುವುದಾಗಿಯೂ ಒಂದು ಲೇಖನದಲ್ಲಿ ಹೇಳಿಕೊಳ್ಳುತ್ತಾರೆ. ಹಾಗೂ ಪೆರಿಯ ಪುರಾಣದ ಭಾಗಗಳನ್ನು ತೀ.ನಂ.ಶ್ರೀಯವರು ವ್ಯಾಸಂಗ ಮಾಡಿರುವುದಾಗಿಯೂ ಹೇಳಿಕೊಳ್ಳುತ್ತಾರೆ. ಅದಕ್ಕಾಗಿ ತೀ.ನಂ.ಶ್ರೀಯವರನ್ನು ಬಹುಭಾಷಾ ಪಂಡಿತರು ಎಂದು ಕರೆಯುತ್ತಾರೆ.

ಈ ಕೃತಿಗೆ ಅನುಗುಣವಾಗಿ ಅಥವಾ ಸಂಬಂಧಿಯಾಗಿ ಸಂಸ್ಕೃತ, ತಮಿಳು, ತೆಲುಗು, ಭಾಷೆಗಳ ಗ್ರಂಥಗಳನ್ನು ಓದಿಕೊಂಡಿದ್ದಾರೆ. ಹರಿಹರನ ಮತದ ನಿರ್ಣಯಕ್ಕೆ ಸಂಬಂಧಪಟ್ಟಂತೆ ಕೆಲವು ಗ್ರಂಥಗಳನ್ನು ಓದಿದ್ದಾರೆ. ಹರಿಹರನ ಕೆಲವು ಅಪೂರ್ವ ಪದ ಪ್ರಯೋಗಗಳಿಗೆ ಸಂವಾದಿ ಪ್ರಯೋಗಗಳ ಸಮರ್ಥನೆಗಾಗಿ ಅನ್ವೇಷಣೆ ನಡೆಸಿದ್ದಾರೆ. ಇವೆಲ್ಲದರ ಪರಿಣಾಮ ಫಲ ನಂಬಿಯಣ್ಣನ ರಗಳೆಯ ಈಗಿನ ಪರಿಷ್ಕೃತ ರೂಪ.

ನಂಬಿಯಣ್ಣನ ರಗಳೆಯ ಮೂಲಕ್ಕೆ ಹತ್ತಿರವಾದ ಕ ಪ್ರತಿಯನ್ನು ನಕಲು ಮಾಡಿಕೊಂಡು ಅದರಲ್ಲಿ ಇವರು ಪ್ರತಿಗಳ ಪಾಠಾಂತರಗಳನ್ನು ಗುರುತು ಮಾಡಿಕೊಂಡು ಪಾಠ ವಿಮರ್ಶೆ ಮತ್ತು ಪಾಠ ನಿರ್ಣಯಗಳನ್ನು ಅದರಲ್ಲಿಯೇ ಉಚಿತ ಚಿಹ್ನೆಗಳಿಂದ ಗುರುತಿಸಿಕೊಂಡು ಕಟ್ಟಕಡೆಯಾಗಿ ಮುದ್ರಣದ ಪ್ರತಿಯನ್ನು ಸಿದ್ಧಮಾಡಿರುವ ಗ್ರಂಥ ಸಂಪಾದನ ಕಾರ್ಯವು ಹಲವು ಹಂತಗಳಲ್ಲಿ ಸಾಗಿ ಬಂದಿರುವುದನ್ನು ಕಾಣಬಹುದಾಗಿದೆ.

''ಇಷ್ಟೆಲ್ಲಾ ಶ್ರಮಪಟ್ಟು ಸಂಪಾದಿಸಿದ ಕೃತಿಗಳಲ್ಲಿಯೂ ಅನೇಕ ಕಾರಣಗಳಿಂದ ಪ್ರಮಾದಗಳು ಉಳಿದುಕೊಂಡಿರುತ್ತದೆ ಎಂಬುದನ್ನು ತೀ.ನಂ.ಶ್ರೀಯವರು ಒಂದು ಕಡೆ ಹೇಳಿಕೊಳ್ಳುತ್ತಾರೆ.'' ಅದನ್ನು ಪ್ರೊ. ಡಿ.ಎಲ್.ಎನ್. ಅವರು ಅವರ ಕನ್ನಡ ಗ್ರಂಥ ಸಂಪಾದನ ಶಾಸ್ತ್ರ ಎಂಬ ಪುಸ್ತಕದಲ್ಲಿ ತೋರಿಸುತ್ತಾರೆ.

'' ನಂಬಿಯಣ್ಣನ ರಗಳೆ ಯಲ್ಲಿ ಕಂಡುಬರುವ ಕೆಲವು ಪ್ರಮಾದಗಳನ್ನು ಡಿ.ಎಲ್. ನರಸಿಂಹಾಚಾರ್ ತೋರಿಸಿ ಅದನ್ನು ಸಂಪಾದಕರಾಗಿ,'' ಪುನಃ ಪರಿಷ್ಕರಣ ಮಾಡಿದ್ದಾರೆ. ಒಟ್ಟಿನಲ್ಲಿ ಈ ಕೃತಿಯಲ್ಲಿ ಕಂಡುಬರುವ ದೋಷಗಳನ್ನು ಅನೇಕ ವಿದ್ವಾಂಸರು ಪತ್ತೆಹಚ್ಚಿ ಸೂಕ್ತವಾದ ವಿವರಗಳಿಂದ ಅದನ್ನು ಕುರಿತು ಚರ್ಚಿಸುತ್ತಾರೆ. ಇನ್ನೊಂದು ಮಾತಿನಲ್ಲಿ ಹೇಳುವುದಾದರೆ ನಂಬಿಯಣ್ಣನ ರಗಳೆಯು ಕನ್ನಡ ಸಾಹಿತ್ಯದಲ್ಲಿ ಅಭೂತ ಪೂರ್ವವಾದ ಅತ್ಯಂತ ಬೆಲೆಯುಳ್ಳ ಕೊಡುಗೆಯಾಗಿದೆ. ಈ ಗ್ರಂಥವು ತೀ.ನಂ.ಶ್ರೀಯವರ ವಿದ್ವತ್, ಪ್ರತಿಭೆಯನ್ನು ಕುರಿತು ಹೇಳುತ್ತದೆ. ಹಾಗೂ ಸಂಪಾದನಾ ಕಾರ್ಯದ ವೈಶಿಷ್ಟ್ಯವನ್ನು ಕುರಿತು ಚರ್ಚಿಸುತ್ತದೆ.

ಮಹಾಕವಿ ಹರಿಹರನ ಉತ್ಕೃಷ್ಟ ರಗಳೆಗಳಲ್ಲಿ ನಂಬಿಯಣ್ಣನ ರಗಳೆ ಯೂ ಒಂದು. ಈ ಕವಿ ಈ ರೀತಿ ಹೇಳಿಕೊಂಡಿದ್ದಾನೆ. ತನ್ನ ಇಷ್ಟದೈವವಾದ ಹಂಪೆಯ ವಿರೂಪಾಕ್ಷನನ್ನು ಕುರಿತು ಶಶಿ ಭೂಷಣಂ ಗೈದೆ ನಾಲಗೆಯಂ ಮಾರಿಕೊಂಡನು ಎಂದು ಹೇಳುತ್ತಾನೆ. ಅಂದರೆ ತನ್ನ ಈ ಧೈರ್ಯದರ್ಶಗಳಿಗೆ ಒಗ್ಗುವಂತಹ ಕಾವ್ಯಶರುತ್ತಗಳನ್ನು ತನ್ನ ಕಾಲಕ್ಕಾಗಲೇ ಪ್ರಖ್ಯಾತಿ ಪಡೆದಿದ್ದ ಶಿವಶರಣರಜೀವನದಿಂದ ಎತ್ತಿಕೊಂಡನು. ಈ

ಕವಿಗೆ ಕಾವ್ಯದ ವಸ್ತುವು ಮೂಲತಃ ಶಿವಭಕ್ತರು. ಅದರಲ್ಲೂ ಕನ್ನಡ ನಾಡಿನ ಶರಣರೇ ಅಲ್ಲದೆ ತಮಿಳುನಾಡಿನ ಪುರಾತನರ ಜೀವನವೂ ಇವನಿಗೆ ಕಾವ್ಯದ ವಸ್ತುವಾಯಿತು. ಈ ನಂಬಿಯಣ್ಣನ ರಗಳೆಯನ್ನು ತೀ.ನಂ.ಶ್ರೀಯವರು ಅದರ ಸೌಂದರ್ಯಕ್ಕೆ ಮನಸೋತು ಅದನ್ನು ಸಂಪಾದಿಸಲು ಮುಂದಾದರು. ಕೈಬರಹದ ಪ್ರತಿಗಳಲ್ಲೇ ಅಡಗಿರಲು ಇನ್ನೂ ಬಿಡದೆ ಇದನ್ನು ಪರಿಷ್ಕರಿಸಿ ಅಚ್ಚು ಮಾಡಿಸುವಂತಹ ಜವಾಬ್ದಾರಿಯೂ ತೀ.ನಂ.ಶ್ರೀಯವರಿಗಿತ್ತು. ಈ ಗ್ರಂಥವನ್ನು ಶೋಧಿಸಲು ಐದು ಮಾತೃಕೆಗಳನ್ನು ಆಧಾರವಾಗಿ ಉಪಯೋಗಿಸಿಕೊಂಡಿದ್ದೇನೆ ಎಂದು ತೀ.ನಂ.ಶ್ರೀಯವರು ತಮ್ಮ ನಂಬಿಯಣ್ಣನ ರಗಳೆ ಕೃತಿಯಲ್ಲಿ ತಿಳಿಸಿದ್ದಾರೆ. ಹರಿಹರನ ರಗಳೆಯ ಮುಖ್ಯ ತಂತ್ರ ಕೈಲಾಸದಿಂದ ಭೂಮಿಗೆ ಬರುವುದು ಮತ್ತೆ ಕೈಲಾಸಕ್ಕೆ ಹೋಗುವುದು ಸಾಮಾನ್ಯವಾಗಿ ಹರಿಹರ ತನ್ನ ಎಲ್ಲ ರಗಳೆಗಳಲ್ಲಿ ಈ ರೀತಿಯಾದ ಕಥನ ತಂತ್ರವನ್ನು ತೋರಿಸಿದ್ದಾನೆ.

ನಂಬಿಯಣ್ಣನು ಶಿವನನ್ನು ಕುರಿತು ಈ ರೀತಿ ಹೇಳುವ ರಗಳೆಯ ಒಂದು ಚರಣ ಈ ಕೆಳಕಂಡಂತೆ ಇದೆ.

ಉದಾ : ಮುದದಿಂದ ಸಾದುತತ್ತುರಿಯ ೯ವುದೆಲೆ ದೇವ
ಬೆನಕಂಗೆ ತಾರಕಾರಿಗೆಯನೆಗೆ ೯ವಿಂದು
ದನಮುಳ್ಳದಂ ತ್ರಯೋಭಾಗ ಮಾಗಿರಲಿಂದು
ಹಚ್ಚಿಕೊಚ್ಚಲ್ಲ ದಾನಾರೋಗಿ ಸಲ್ಕೀಯ
ಅಚ್ಚಿಗಂಗೊಳಿಸುತಿನ ದೊಂದಡಿಯ ಡಿಲೀಯೆ ॥

(ನಂಬಿಯಣ್ಣನ ರಗಳೆ ೧ನೇ ಸ್ಥಲ)

ಎಂದು ಹೇಳುವನು. ಈವಿಷಯ ಪುರಾಣದಲ್ಲಿ ಬಹುಶಃ ಹರಿಹರ ಇದನ್ನು ತೇವಾರಗಳಿಂದ ಸ್ವೀಕರಿಸಬೇಕು. ಪುರಾಣದಲ್ಲಿಲ್ಲದ ಕೆಲವು ಸಂಗತಿಗಳು ರಗಳೆಯಲ್ಲಿದೆ. ತುಂಬುರನೆಂಬಮಂತ್ರಿ, ರಾಜಪರಿವಾರಸೇನೆ, ಇವೆಲ್ಲವೂ ನಂಬಿಗೆ ಶಿವನಾಳದ ಮೇಲೆಯೂ ಇದೆ. ನಂಬಿ ಹೊರಗೆ ಹೊರಟಾಗಲೆಲ್ಲಾ ಪೆರುಮಳಲೆಯ ಕುಟುಂಬ ಮುಂದೆ ಗೆಜ್ಜೆಗಟ್ಟಿ ಕುಣಿಯುವವನು ಪುರಾಣದಲ್ಲಿ ಈತ ನಂಬಿಯ ಪರೋಕ್ಷ ಭಕ್ತ

ಸೋಮಾಸಿಮಾರನೆಂಬ ಭಕ್ತನ ಇಚ್ಛೆಯಂತೆ ನಂಬಿಯಣ್ಣನು ಶಿವನನ್ನು ಯಾಗಕ್ಕೆ ಕರೆದೊಯ್ಯುವ ವಿಷಯ ಪುರಾಣದಲ್ಲಿಲ್ಲ, ರಗಳೆಯಲ್ಲಿದೆ. ಚೇರ ಮನವೂರು ರಗಳೆಯಲ್ಲಿ ತಿರುಪಾಂಡ್ಯಕ್ಕೂಡು ಮುಡಿ ಪುರಾಣದಲ್ಲಿ ಕೊಡುಕೋಳೂರು ಹೀಗೆ ಪೆರಿಯ

ಪುರಾಣದಲ್ಲಿಲ್ಲದ ಹೊಸ ವಿಷಯಗಳು ಸನ್ನಿವೇಷಗಳು ಇಲ್ಲಿ ಬಂದಿದೆ. ಪೆರಿಯ ಪುರಾಣದಲ್ಲಿರುವ ಅನೇಕ ಪ್ರಸಂಗಗಳು ಇಲ್ಲಿ ಬಂದಿಲ್ಲ. ಕಥೆವಸ್ತುವಿನಲ್ಲಿ ಗಮನಾರ್ಹ ವ್ಯತ್ಯಾಸವಿದೆ. ವಸ್ತುವಿನ ವಿನ್ಯಾಸದಲ್ಲಿ ವ್ಯತ್ಯಾಸವಿದೆ. ಸ್ಥಳನಾಮ, ವೃತ್ತಿನಾಮಗಳಲ್ಲಿ ವ್ಯತ್ಯಾಸವಿರುವುದನ್ನು ಗಮ ಸಬಹುದು.

''ತೀ.ನಂ.ಶ್ರೀಯವರು ಗ್ರಂಥದಲ್ಲಿ ಅನೇಕ ತಿದ್ದುಪಡಿಗಳನ್ನು ಮಾಡಿದ್ದಾರೆ. ಅದನ್ನು ಪರಿಷ್ಕರಿಸಿದ್ದಾರೆ. ಈ ಕೆಳಗಿನ ಕೆಲವು ನಂಬಿಯಣ್ಣನ ರಗಳೆಯ ಕೆಲವು ಪದ್ಯಭಾಗಗಳನ್ನು ಗಮನಿಸಿದಾಗ ತೀ.ನಂ.ಶ್ರಿಯವರು ಇವುಗಳಲ್ಲಿರುವ ಅನೇಕ ದೋಷಗಳನ್ನು ಪರಿಷ್ಕರಿಸಿದ್ದಾರೆ.''[೧೦]

ತೀ.ನಂ.ಶ್ರೀ.ಯವರು ಪರಿಷ್ಕರಿಸಿರುವ ಕೆಲವು ಪಾಠದೋಷಗಳು

ಉದಾ : ಶ್ರೀ ಸಕಲ ಸುರರಸುರರೊಂದು ಕಾರಣದಿಂದ
(ವಾ) ಸುರದದುರ್ವಾಸ ತ್ತ ಶಾಪದಿ (ನೊಂದ)
ಸುರಪತಿಯ ಕೆಚ್ಚು ಸಂಪದಮಂ ತಾರಲ್ಕೆಂದು
ಏರುವಣಿಸಿ ತೊಡಗಿದರು ಕಡಲ ಕಡಯಲ್ಕೆಂದು
ಅಮೃತ ಮಥನಂ ಮಾಡುತಿರಲು ದಯಿಸಿದವಂದು
ಕ್ರಮದಿಂದವಿಂದು ಸಭೆಲಕ್ಷ್ಮಿ ಕೌಸ್ತುಭವಂದು
ಸುರಗಜಂ ಸುರಕುಜಂ ಸುರಧೇನುಗಳು ಪುಟ್ಟಿ
ಸುರುತುಂಗಾಧ್ಯಖಿಳ ವರವಸ್ತುಗಳು ಪುಟ್ಟಿ
ತಣಿವಿಲ್ಲದಡಸಿ ಮತ್ತ್ತಿಮಥನಮಂ ಮಾಡೆ
ಹೆಣಮಯಂ ಮಾಡುತಂ ಪೊ ಅಲಮಟ್ಟುದದು ನೋಡೆ
ಮಸಗಿಭರದಿಂದ ಸುರರಮರುಂ ಕೆಡಪುತ್ತೆ
(೧೭೦ ಒಂದನೆ ಸ್ಥಲ)

ಈ ಮೇಲಿನ ವಾಕ್ಯದಲ್ಲಿ ಅನೇಕ ದೋಷಗಳನ್ನು ತೀ.ನಂ.ಶ್ರೀಯವರು ಗುರುತಿಸಿ ಅವುಗಳಲ್ಲಿ ಪ್ರಕ್ಷೇಪ ಭಾಗಗಳನ್ನು ಗುರುತಿಸಿ ಅನೇಕ ತಿದ್ದುಪಡಿಗಳನ್ನು ಮಾಡಿದ್ದಾರೆ. ನಂಬಿಯಣ್ಣನ ರಗಳೆಯ ಪ್ರತಿ ಪದ್ಯದಲ್ಲೂ ಅನೇಕ ತಿದ್ದುಪಡಿಗಳು ಕಾಣಿಸಿಕೊಳ್ಳುತ್ತದೆ. ಈ ಮೇಲಿನ ಪದ್ಯದಲ್ಲಿ ಮೊದಲನೆಯ ಸಾಲಿನಲ್ಲಿ ಕಾರಣದಿಂದ ಎಂಬ ಪದ ಇದೆ. ಅದರ ಬದಲಾಗಿ 'ಕಾರಣದೆ' ಅಂತ ಆಗಬೇಕು ಎಂದು ಅದೇ ರೀತಿ ಎರಡನೆಯ ಸಾಲಿನಲ್ಲಿ ವಾಸುರ 'ದ' ಬದಲು 'ವಾಸುರಣ' ಇರಬೇಕೆಂದು ಊಹಿಸಿದರು. ಅದೇ ಸ್ಥಳದಲ್ಲಿ

'ದುರ್ವಾಸನಿತ್ತ' ಈ ಪದದ ಮೊದಲನೆಯ ಅಕ್ಷರ 'ದೂ' ಬರಬೇಕು. ಅಂದರೆ 'ದೂರ್ವಾಸ' ಎಂದು ಆಗಬೇಕು ಎಂದು ನಿಶ್ಚಯಿಸಿದರು. ಅದೇ ಸಾಲಿನಲ್ಲಿ 'ನೊಂದ' ಬದಲು 'ನಿಂದೆ' ಎಂಬುವ ಪದ ಬರಬೇಕು. ಅದೇ ರೀತಿ ನಾಲ್ಕನೆಯ ಸಾಲಿನಲ್ಲಿ 'ಕಡತ' ಬದಲು 'ಕಡಲಂ' ಎಂದು ಇರಬೇಕು. ಕಡಲ್ಕೆಂದು ಬದಲು ಕಡೆಯಲೆಂ ಇರಬೇಕೆಂದು ಆರನೆಯ ಸಾಲಿನಲ್ಲಿ ಪೊ ಮುಚ್ಚುದದು ಇಲ್ಲಿ 'ಪೊ' ಬದಲು 'ಹೊ' ಎಂಬ ಅಕ್ಷರ ಬರಬೇಕು. ಎಂದು ನಿಶ್ಚಯಿಸಿದರು. ಅದೇ ರೀತಿ ''ಹನ್ನೊಂದನೇ ಸಾಲಿನಲ್ಲಿ ಮಸಗಿ ಭರದಿಂದ ಸುರರ ಮರಂ ಕೆಡ ಪುತ್ತೆ ಇಲ್ಲಿ ಮಸಗಿ...ರಸುರರಸಂ...ವಸುದೆ ಪೋಳಿದೆ XXXXX ಮರರಂ ಅಕ್ಷರಗಳು ಗ್ರಂಥಪಾತವಾಗಿರುವುದನ್ನು ಇಲ್ಲಿ X ಎಂಬ ಚಿಹ್ನೆಯ ಮೂಲಕ ತಿಳಿಸುತ್ತಾರೆ.''[೧೧] ಅದರ ಪದ ಈ ರೀತಿ ಇರಬೇಕೆಂದು ತಿಳಿಸುತ್ತಾರೆ. ಅದೇನೆಂದರೆ ಯಸಗಿ ಭರದಿಂದ ಸುರಂ ಸುದರ ಎಂಬುದು ಇರಬೇಕೆಂದು ತಿಳಿಸುತ್ತಾರೆ. ಹರಿಹರ ಒಬ್ಬ ಕ್ರಾಂತಿಕಾರಿ ಕವಿ ಎಂದು ಹೇಳಬಹುದು. ಅಂದರೆ ಸ್ವತಂತ್ರ ಮನೋವೃತ್ತಿಯವನು. ಯಾವ ರಾಜಾಶ್ರಯಕ್ಕೂ ಒಳಗಾಗದೆ ವರ್ಣಿತ ಸಂಪ್ರದಾಯದ ದೇಶೀಯ ಕಾವ್ಯ ಪದ್ಧತಿಯಲ್ಲಿ ರಗಳೆಗಳನ್ನು ರಚಿಸಿದ ಎಂದು ಹೇಳಬಹುದು. ಹರಿಹರ ಕಾವ್ಯವಸ್ತುವಿನ ವಿಷಯದಲ್ಲಿಯೂ ಆವನದು ಕ್ರಾಂತಿಯ ನಡಿಗೆಯೇ ಎಂದು ಹೇಳಬಹುದು. ಹರಿಹರ ಹಂಪೆಯ ವಿರೂಪಾಕ್ಷ ಪರಮಭಕ್ತನಾದ್ದರಿಂದ ಶಿವಶರಣರ ಜೀವತವನ್ನೇ ತನ್ನ ಕಾವ್ಯಕ್ಕೆ ವಸ್ತುವಾಗಿಸಿಕೊಂಡ. ಜೊತೆಗೆ ಉತ್ಪ್ರೇಕ್ಷೆಗೆ ಹೋಗದೆ ಶರಣರ ಜೀವನದಲ್ಲಿ ಸಾಮರಸ್ಯವನ್ನು ಕಾಣತೊಡಗಿದ ಎಂದು ಹೇಳಬಹುದು.

ಹರಿಹರ ಒಬ್ಬಪವಾಡ ಪುರುಷ ಏಕೆಂದರೆ ಅವನ ಜೀವನದಲ್ಲಿ ನಡೆದ ಎರಡು ಪವಾಡಗಳನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸಬಹುದಾಗಿದೆ. ''ಹರಿಹರನು ದ್ವಾರಸಮುದ್ರದಲ್ಲಿ ಕರಣಿಕನಾಗಿದ್ದಾಗ ತಟ್ಟನೆ ಎಚ್ಚೆತ್ತವನಂತೆ ವಿರೂಪಾಕ್ಷ ಎನ್ನುತ್ತ ತನ್ನ ಎರಡು ಕೈಗಳನ್ನು ಹೊಸಕಿ ಹಂಪೆಯಲ್ಲಿ ವಿರೂಪಾಕ್ಷ ದೇವಾಲಯದ ತೆರೆಗೆ ಹತ್ತಿದ್ದ ಬೆಂಕಿಯನ್ನು ಆರಿಸಿದುದು.''[೧೨] ಮತ್ತೆ ಹರಿಹರದ ಹರಿಹರೇಶ್ವರ ದೇವಾಲಯದಲ್ಲಿದ್ದ ಬ್ರಹ್ಮರಾಕ್ಷಸನನ್ನು ಓಡಿಸಿ ಎಂದಿನಂತೆ ಅಲ್ಲಿ ದೇವರಿಗೆ ಪೂಜೆ ನಡೆಯುವಂತೆ ಮಾಡಿದುದು ಈ ಎರಡೂ ಹರಿಹರನ ಕಾಲವನ್ನು ಹದಿಮೂರನೇ ಶತಮಾನದಲ್ಲಿ ಆದಿಭಾಗವೆಂದು ನಿರ್ಣಯಿಸಲು ನೆರವು ನೀಡುತ್ತದೆ.

ಹರಿಹರನ ರಗಳೆಗಳಲ್ಲಿ ಮುಖ್ಯವಾಗಿ ಕಂಡುಬರುವ ಮುಖ್ಯ ಅಂಶವೆಂದರೆ ಕಾಯಕ ತತ್ವ ಏಕೆಂದರೆ ಹರಿಹರನ ರಗಳೆಯಲ್ಲಿಯ ಶರಣರು ತಮ್ಮ ತಮ್ಮ ಪ್ರವೃತ್ತಿ ಅನುಗುಣವಾದ ಸಾಮರ್ಥ್ಯಕ್ಕೆ ಅಳವಡಿಸುವಂತಹ ವೃತ್ತಿಯನ್ನು ಹೊಂದಿದವರು ತಮ್ಮ

ತಮ್ಮ ವೃತ್ತಿಯನ್ನೇ ಶ್ರೇಷ್ಠ ಎಂದು ಬಗೆದವರು ಎಂದು ಹೇಳಬಹುದು. ಹರಿಹರನ ಭಕ್ತಿಭಾವನೆ ತುಂಬಿ ಹರಿದುದು ರಗಳೆಗಳಲ್ಲಿ ಭಕ್ತ ಕವಿಯಾದ ಈತನು ಶಿವಶರಣರ ಚರಿತ್ರೆಗಳನ್ನು ಬರೆಯುವ ನೆವದಲ್ಲಿ ತನ್ನ ಭಕ್ತಿಯ ಪರಾಕಾಷ್ಠೆಯನ್ನು ಮೆರೆದಿದ್ದಾನೆ. ಕಾಯಕರೂಪದಲ್ಲಿ ಹೆಚ್ಚಿನ ಆಸಕ್ತಿ ತಳೆದವರಾಗಿದ್ದಾರೆ ಎಂದು ಹೇಳಬಹುದು.

ಹರಿಹರನು ಶಿವಶರಣರ ಚರಿತ್ರೆಗಳನ್ನು ವಿವರಿಸುವಾಗ ಅವರ ಕುಲ, ಕೈಗೊಂಡ ಕಾಯಕ, ಕಾಯಕನಿಷ್ಠೆ, ಕಾಯಕ ನಿಷ್ಠೆಯ ಸತ್ವಪರೀಕ್ಷೆ, ಶಿವಸಾಕ್ಷಾತ್ಕಾರ, ಈ ಕ್ರಮ ಅನುಸರಿಸಿದುದು ಕಂಡುಬರುತ್ತದೆ. ನಂಬಿಯಣ್ಣನ ರಗಳೆಯಲ್ಲಿಯೂ ಈ ಮೇಲಿನ ಎಲ್ಲಾ ಅಂಶಗಳು ಅಡಗಿಗೊಂಡಿರುವುದನ್ನು ಕಾಣಬಹುದಾಗಿದೆ. ಹೀಗೆ ರಗಳೆ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದ್ದರೂ ಅದಕ್ಕೊಂದು ಭದ್ರವಾದ ನೆಲೆಬೆಲೆಯನ್ನು ಕನ್ನಡ ಛಂದಸ್ಸುಶಾಸ್ತ್ರದಲ್ಲಿ ತಂದುಕೊಟ್ಟವನು ಹರಿಹರ ರಗಳೆಗೆ ಉನ್ನತ ಸ್ಥಾನವನ್ನು ಹಾಗೂ ವ್ಯಾಪ್ತಿ ತಂದುಕೊಟ್ಟು ರಗಳೆಗೆ ಜೀವಕಳೆಯನ್ನು ತುಂಬಿದ ಕೀರ್ತಿ ಅವನದು.

ಹರಿಹರನು ತನ್ನ ಕಾವ್ಯಗಳನ್ನು ರಚಿಸುವಾಗ ಕೆಲವು ವಿಶಿಷ್ಟವಾದ ತಂತ್ರಗಳನ್ನು ಬಳಸಿರುವುದು ಕಾಣುತ್ತದೆ. ಆದಿ, ಅಂತ್ಯದ ಪ್ರಾಸದ ಪ್ರಯೋಗಗಳನ್ನು ಕಾಣುತ್ತೇವೆ. ಗಣಸಂಯೋಜನೆಯಲ್ಲಿ ಛಂದೋಯಮದ ಹದ್ದನ್ನು ಮೀರದೆ ವೈವಿಧ್ಯವನ್ನು ತಂದಿದ್ದಾನೆ. ಪದದ ಕೊನೆಯಲ್ಲಿ ಭಾವ, ರಾಗ ಅಥವಾ ಅರ್ಥವನ್ನು ಕೊನೆಗೊಳಿಸಿದೆ ಅದನ್ನು ಮುಂದಿನ ಪಾದಕ್ಕೂ ಆರಿಸಿ ಅಲ್ಲಿನ ಸೌಂದರ್ಯವನ್ನು ಉನ್ನತೀಕರಿಸಿದ್ದಾನೆ. ಈ ವೈಶಿಷ್ಟ್ಯಗಳು ಕೂಡ ಹರಿಹರನ ರಗಳೆಕಾವ್ಯಗಳಿಗೆ ಕಳೆಯನ್ನು ತಂದುಕೊಟ್ಟಿದೆ.

ಒಟ್ಟಿನಲ್ಲಿ ಹರಿಹರ ಕನ್ನಡ ಸಾಹಿತ್ಯದ ಕ್ರಾಂತಿಕಾರಿಯಷ್ಟೇ ಅಲ್ಲ ಛಂದಸ್ಸನ್ನು ಬಳಸುವುದರಲ್ಲಿಯೂ ಕ್ರಾಂತಿಯ ಕಹಳೆಯನ್ನು ಊದಿದ ವಿದ್ವಾಂಸನೂ ಹೌದು. ರಗಳೆ ಛಂದಸ್ಸಿನಲ್ಲಿ ಕಾವ್ಯವನ್ನು ಬರೆಯುವುದರಲ್ಲಿಯೂ ಆದಿ, ಅಂತ್ಯ, ಪ್ರಾಸಗಳನ್ನು ರೂಪಿಸುವಲ್ಲಿಯೂ ''ಒಂದೇ ಕಾವ್ಯದಲ್ಲಿ ವೈವಿಧ್ಯಮಯ ರಗಳೆಗಳನ್ನು ಬಳಸುವುದರಲ್ಲಿಯೂ, ದೊಡ್ಡ ದೊಡ್ಡ ಕಾವ್ಯಗಳಲ್ಲಿಯೂ ಒಂದು ಸ್ಥೂಲರಗಳೆ, ಒಂದು ಸ್ಥೂಲ ಗದ್ಯವನ್ನು ಬರೆಯುವುದರಲ್ಲಿಯೂ ರಗಳೆಯ ಜೊತೆ ಕಂದ, ವೃತ್ತಗಳನ್ನು ಬಳಸಿ ಒಂದು ಹೊಸ ಬಗೆಯ ಚಂಪೂಕಾವ್ಯದ ಮಾರ್ಗವನ್ನು ಹಾಕಿಕೊಟ್ಟವರಲ್ಲಿಯೂ ಇವನು ಮೊದಲಿಗನು''[೧೨] ಎಂದು ಛಂದಸ್ಸು ಶಾಸ್ತ್ರ ಪರಣಿತರಾದ ನೀಗಿರಿಗೌಡ ಈ ಮೇಲಿನ ಮಾತನ್ನು ಹೇಳುತ್ತಾರೆ. ನಂಬಿಯಣ್ಣನ ರಗಳೆಯಲ್ಲಿಯೂ ಕೂಡ ಹರಿಹರ ಲಲಿತ ರಗಳೆಯನ್ನು ಬಳಸಿರುವುದನ್ನು ಕಾಣಬಹುದಾಗಿದೆ. ಜೊತೆಗೆ ಹರಿಹರನ ರಗಳೆಗಳಲ್ಲಿ ಮುಖ್ಯವಾಗಿ ಕಾಣುವ ಗುಣವೆನೆಂದರೆ ಭಕ್ತಿಗೆ ಹೆಚ್ಚು ಪ್ರಾಧಾನ್ಯತೆ ಕೊಟ್ಟು ಆ ಭಕ್ತಿಯ

ಪರಿಧಿಯಲ್ಲಿ ಬರುವ ನಾಯಕರನ್ನೇ ತನ್ನ ಕಾವ್ಯದ ವಸ್ತುವಾಗಿಸಿದ್ದಾನೆ. ಇವನ ಕಾವ್ಯದಲ್ಲಿ ಏಕನಾಯಕನ ಪಾತ್ರ ಬಹಳ ಮುಖ್ಯವಾದುದು.

ಹರಿಹರ ಭಾಷಾ ಶೈಲಿಗೆ ಒಳ್ಳೆಯ ಚಿತ್ರಕ ಶಕ್ತಿಯುಂಟುಮಾಡಿದ ನಂಬಿಯಣ್ಣನ ರಗಳೆಯಲ್ಲಿ ಬರುವ ವೃದ್ಧ ವೇಷದ ಶಿವನ ವರ್ತನೆಯ ವರ್ಣನೆಯನ್ನು ನೋಡಬಹುದು. ಕಯ್ಯಕೊಡೆಯಂ ಮಯ್ಯ ತೆರೆಯಂ ಜೋಲ್ವ ಪುರ್ವಿಲನೆಲ್ವತೊಳ ತೊವಲಿಂ ಇಟ್ಟೆ ವಿಭೂತಿಯಂ ಉಳಿದ ಯಷ್ಟಿಯ ಕೋಲಿದಂ ಪಿಡಿದ ಕಮಂಡಲದಿಂ ಇಳಿದ ಬೆಳುಗಡ್ಡದಿಂ ನಡುಗುವ ನರದಲೆಯಿಂ ನರೆತು ಸಡಿಲಲ್ವ ಸರ್ವಾಂಗದಿಂ ಪುಣ್ಯಂ ಪಣ್ಣಾದಂತೆ ಒವ್ಮೊವ್ಮೆ ಕೆವ್ಮುತ್ತೋ ವ್ಮೆವ್ಮೆ ಗೊಹೆ ಗೊಹೆಗುಟ್ಟುತಂ ಶಿಥಿಲಾಕ್ಷರಂಗಳಿಂ ನಮಃಶಿವಾಯ ನಮಃ ಶಿವಾಯಯೆನುತ್ತೆನಲಾರದಂತೆ ನಡುಗುತ್ತುಂ (ನಂಬಿಯಣ್ಣನ ರಗಳೆಯ ಸ್ಥಲ- ೬)

ಅಂದರೆ ಈ ಮೇಲಿನ ರಗಳೆಯ ಭಾಗದಲ್ಲಿ ಶಿವನು ವಿಚಿತ್ರ ವೇಷಧಾರಿಯಾಗಿ ತನ್ನ ಭಕ್ತನನ್ನು ಪರೀಕ್ಷೆ ಮಾಡಲು ಬರುತ್ತಿದ್ದನ್ನು ಕಾಣಬಹುದಾಗಿದೆ. ಭಗವಂತನ ಪರೀಕ್ಷೆಯಲ್ಲಿ ಭಕ್ತರು ಗೆದ್ದರೆ ಕೊನೆಯಲ್ಲಿ ಅವರಿಗೆ ಮೋಕ್ಷ ಸಾಮ್ರಾಜ್ಯ ಲಭಿಸುತ್ತದೆ ಎಂಬ ಒಂದು ಪ್ರತೀತಿ ಇದೆ. ಇದು ಹರಿಹರ ರಗಳೆಗಳಲ್ಲಿ ವಿಚಿತ್ರವಾಗಿ ವ್ಯಕ್ತ ವಾಗಿರುವುದನ್ನು ಕಾಣಬಹುದಾಗಿದೆ.

ಇಂಥವೇ ಭಾಷೆಯ ಚಿತ್ರಕ ಶಕ್ತಿ ಇದೆ ರಗಳೆಯಲ್ಲಿ ಬರುವ ಹೆಣ್ಣೊಬ್ಬಳ ರೂಪ ಯೌವ್ವನವನ್ನು ವರ್ಣಿಸುವ ಪದ್ಯ ''ಹರೆಯಂ ಕಿಳಿದು ಯೌವನಂ ಪಿರಿದಾಗಿ ಮುಖವೆಲ್ಲಂ ಕಣ್ಣು ಬೆನ್ನೆಲ್ಲಂ ಮುಡಿ ಉರವೆಲ್ಲಂ ಮೊಲೆ ಪಿಂತೆಲ್ಲಂ ನಿತಂಬಂ ನಡೆಯೆಂಬ ಮೃದು ನುಡಿಯೆಲ್ಲಂ ನೋಡ ನೋಡವೆಲ್ಲಂ ಬೇಟ'' (ಸ್ಥಲ-೪)

ಒಂದು ಹೆಣ್ಣಿನ ಸಹಜವಾದ ಸೌಂದರ್ಯವನ್ನು ಪ್ರತಿಬಿಂಬಿಸುವ ಪದ್ಯವಾಗಿದ್ದು ಹೆಣ್ಣಿನ ನಡತೆ ಹಾಗೂ ಕೆಲವು ಸೂಕ್ಷ್ಮವಾದ ವಿಚಾರಗಳನ್ನು ಹೇಳುತ್ತದೆ. ಹರಿಹರನು ಒಂದು ಹೆಣ್ಣಿನ ರೂಪ ಹಾಗೂ ಲಾವಣ್ಯವನ್ನು ಕುರಿತು ಹೇಳುವ ಮಾತಾಗಿದೆ. ಹರಿಹರ ಛಂದಸ್ಸು, ವ್ಯಾಕರಣ, ವಸ್ತು, ಪ್ರಕಾರ, ಶೈಲಿ ಮುಂತಾಗಿ ಹಲವು ವಿನೂತನತೆಯಿಂದ ಸಾಹಿತ್ಯದಲ್ಲಿ ತಂದ ಹರಿಹರ ಮಹಾಕವಿ ಅದೇ ರೀತಿ ಗದ್ಯದ ಬಳಕೆಯಲ್ಲಿಯೂ ವಿನೂತನತೆಯನ್ನು ಮೆರೆದಿದ್ದಾನೆ. ರಗಳೆಗೆ ವಿಶೇಷ ಸ್ಥಾನ ಕೊಟ್ಟಂತೆ ಆತ ಗದ್ಯಕ್ಕೆ ತನ್ನ ಕಾವ್ಯಗಳಲ್ಲಿ ವಿಶೇಷ ಸ್ಥಾನವನ್ನು ಕೊಟ್ಟಿದ್ದಾನೆ.

ಹರಿಹರನು ಶಿವಶರಣರನ್ನುಳಿದು ಬೇರೆಯುವರ ಮೇಲೆ ಕಾವ್ಯ ಬರೆಯುವುದಿಲ್ಲವೆಂದು ಸಂಕಲ್ಪ ತೊಟ್ಟ ಕವಿ. ಹರಿಹರನ ಕಾವ್ಯಗಳ ಉತ್ಕೃಷ್ಟತೆಗೆ ಮುಖ್ಯ ಕಾರಣ ಓದುವವರಲ್ಲುಂಟಾಗುವ ಭಾವವೇಷ ರಸಗಳು. ಹರಿಹರನ ಜೀವನದ ಮೇಲೆ ಬೆಳಕು ಬಿರುವ ಕೆಲವು ಆಧಾರಗಳೆಂದರೆ 'ಪದ್ಮಣಾಂಕನ ಪದ್ಮರಾದ ಪುರಾಣದಲ್ಲಿ ಹರಿಹರನ ಜೀವಿತಕ್ಕೆ ಸಂಬಂಧಿಸಿದ ವಿಷಯಗಳು ಬರುತ್ತದೆ. ಅದೇ ರೀತಿ ''ಡಿ.ಎಲ್. ನರಸಿಂಹಚಾರ್ಯರ 'ಹಂಪೆಯ ಹರಿಹರ' ಎಂಬ ಪುಸ್ತಕದಲ್ಲಿ ಹರಿಹರನ ಕಾಲದ ಬಗ್ಗೆ ಹಾಗೂ ಅವನ ಕೃತಿಗಳ ಬಗ್ಗೆ ಸ್ವಲ್ಪ ಮಾಹಿತಿ ಒದಗಿಸಿಕೊಡುತ್ತಾರೆ.''

ಅದೇ ರೀತಿ ವಿರುಪಾಕ್ಷ ಪಂಡಿತನ 'ಚನ್ನಬಸವ ಪುರಾಣ' ಎಂಬ ಕೃತಿಯಲ್ಲಿ ಹರಿಹರನಿಗೆ ಸಂಬಂಧಪಟ್ಟ ಕೆಲವು ವಿಚಾರಗಳು ಕಂಡುಬರುತ್ತದೆ. ಅದೇ ರೀತಿ ಸಿದ್ಧನಂಜೇಶನ 'ರಾಘವಾಂಕ ಚರಿತ್ರೆ' ಮತ್ತು 'ಗುರುರಾಜ ಚಾರಿತ್ರ್ಯಗಳಲ್ಲೂ ಶಾಂತಲಿಂಗದೇಶಿಕನು ತನ್ನ 'ಭೈರವೇಶ್ವರ ಕಾವ್ಯದ' ಕಥಾ ಮಣಿಸೂತ್ರ ರತ್ನಾಕರ ದಲ್ಲಿಯೂ' ಹರಿಹರನ ಸಂಗತಿಗಳನ್ನು ತಿಳಿಸುತ್ತಾರೆ.

ಈ ಮೇಲಿನ ಎಲ್ಲಾ ಕೃತಿಗಳಿಂದ ತಿಳಿದುಬರುವ ಮುಖ್ಯ ಅಂಶಗಳೆಂದರೆ ಹರಿಹರನ ಊರು ಹಂಪೆ, ಅವನ ಆರಾಧ್ಯದೇವರು ಹಂಪೆಯ ವಿರೂಪಾಕ್ಷ. ಇವನ ತಂದೆ ಮಹದೇವ ಎಂಬ ಆರಾಧ್ಯ ಬ್ರಾಹ್ಮಣ ತಾಯಿ ಶರ್ವಾಣಿ, ಹರಿಹರನಿಗೆ ರುದ್ರಾಣಿ ಎಂಬ ಅಕ್ಕನೊಬ್ಬಳಿದ್ದಳು. ಅವಳ ಮಗನೇ ರಾಘವಾಂಕ. ಹರಿಹರನ ಗುರು ಪ್ರತ್ಯಕ್ಷ ಪಂಚಾನನೆನಿಸಿದ ಮಾಯಿದೇವ. ಬಾಲ್ಯದಲ್ಲಿ ಹರಿಹರ ಆ ಗುರುವಿನ ಬಳಿ ವಿದ್ಯಾವ್ಯಾಸಂಗ ಮಾಡಿ ಸಕಲ ಶಾಸ್ತ್ರ ಪಾರಂಗತನಾದ ಆತನ ಕಾಲ ಹದಿಮೂರನೆಯ ಶತಮಾದ ಆದಿಭಾಗ. ಹೊಯ್ಸಳ ರಾಜರಲ್ಲಿ ಕರಣಿಕನಾಗಿದ ಎಂದು ತಿಳಿದುಬರುತ್ತದೆ. ಇವನು ರಚಿಸಿದ ರಗಳೆಗಳು ಎಷ್ಟು ಎಂಬುದುರ ಬಗ್ಗೆ ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯವಿಲ್ಲ.

ಈ ರೀತಿಯಾಗಿ ಹರಿಹರನ ರಗಳೆ ಹಾಗೂ ಅವನ ಕಾಲ, ಸ್ಥಳ ಹಾಗೂ ಅವನು ರಚಿಸಿದ ನಂಬಿಯಣ್ಣನ ರಗಳೆಯ ಬಗ್ಗೆ ಕೆಲವು ಮಾಹಿತಿಗಳನ್ನು ಈ ಲೇಖನದಲ್ಲಿ ಪಟ್ಟಿಮಾಡಿದ್ದೇನೆ.

## ಗದಾಯುದ್ಧ ಸಂಗ್ರಹಂ (೧೯೪೯)

ತೀ.ನಂ.ಶ್ರೀಯವರು ಸಂಪಾದಿಸಿರುವ ಈ ಸಂಗ್ರಹಕ್ಕೆ ಕೊಟ್ಟಿರುವ ಟಿಪ್ಪಣಿ೧೧೬ ಪುಟಗಳಷ್ಟು ಈ ಟಿಪ್ಪಣಿಗಳು ಹಳೆಗನ್ನಡ ಭಾಷೆ ಹಾಗೂ ಕಾವ್ಯಗಳನ್ನು ಅಭೂತಪೂರ್ವವಾಗಿ ಹೊಂದಿದೆ.

ಹಿರಿಯ ತಲೆವಾರಿನ ವಿದ್ವಾಂಸರಾದಿಯಾಗಿ ಹೊಸ ತಲೆವಾರಿನ ವಿಮರ್ಶಕರವೆಗೂ ಈಕೃತಿಯು ಬಹುಮುಖೀ ಚರ್ಚೆಗೆ ಒಪ್ಪಿಕೊಂಡ ಕೃತಿಯು ಈ ಕೃತಿಯನ್ನು ಕುರಿತು ಹಲವಾರು ಪುಸ್ತಕಗಳು, ಲೇಖನಗಳು ಪ್ರಕಟಗೊಂಡಿದೆ. ಇಂತಹ ಕೃತಿಯನ್ನು ಸಂಪಾದನೆ ಮಾಡಿ ಪ್ರಕಟಿಸಿದ ಕೀರ್ತಿ ತೀ.ನಂ.ಶ್ರೀಯವರಿಗೆ ಸಲ್ಲುತ್ತದೆ.

ತೀ.ನಂ.ಶ್ರೀಯವರಿಗಿಂತ ಮೊದಲೇ ಈ ಗದಾಯುದ್ಧವನ್ನು ಸಂಪಾದಿಸಿ ಪ್ರಕಟಿಸಿದವರು ೧೮೯೫ರಲ್ಲಿ ಎಸ್.ಜಿ. ನರಸಿಂಹಾಚಾರ್ ಮತ್ತು ಎಂ.ಎ. ರಾಮಾನುಜಯ್ಯಂಗಾರ್‌ರವರು ಸಂಪಾದಿಸಿ ಪ್ರಕಟಿಸಿದರು. ೧೯೨೫ರಲ್ಲಿ ಮತ್ತೆ ಇದನ್ನು ಆಮೂಲಗ್ರವಾಗಿ ಪರಿಷ್ಕರಿಸಿದ ಎಂ.ಎ. ರಾಮಾನುಜಯ್ಯಂಗಾರ್‌ರವರು 'ಕವಿ ಚರಿತ್ರೆ', 'ಗ್ರಂಥ ವಿಮರ್ಶೆ' ಇತ್ಯಾದಿಗಳೊಡನೆ ಮೂರನೆಯ ಮುದ್ರಣವನ್ನು ಹೊರತಂದರು.

೧೯೪೯ರಲ್ಲಿ ವಿದ್ವಾನ್ ಕೆ.ವಿ. ಕೃಷ್ಣಭಟ್ಟರು ಮದ್ರಾಸಿನ ಓರಿಯೆಂಟಲ್ ಮ್ಯಾನುಸ್ಕ್ರಿಪ್ಟ್ ಲೈಬ್ರರಿಯಲ್ಲಿದ್ದ ಜೀರ್ಣವಾದ ಓಲೆಯ ಪ್ರತಿಯನ್ನು ಪುನರುಜ್ಜೀವಿತಗೊಳಿಸಿ ಪ್ರತಿಮಾಡಿದ ಕಾಗದದ ಪ್ರತಿಯನ್ನು ಮತ್ತು ಮೈಸೂರು ಓರಿಯೆಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ ಕಾಗದ ಪ್ರತಿಯನ್ನು ಆಧರಿಸಿ ಸಂಪಾದಿಸಿದರು. ತದನಂತರ ತೀ.ನಂ.ಶ್ರೀಯವರು ೧೯೪೯ರಲ್ಲಿ ಗದಾಯುದ್ಧ ಸಂಗ್ರಹವನು ಸಂಪಾದಿಸಿ ಹೊರತಂದರು. ಆದರೆ ರಾಮನುಜಯ್ಯಂಗಾರ್ ಹಾಗೂ ಎಸ್.ಜಿ. ನರಸಿಸಂಹಾಚಾರ್, ಕೇಶವಭಟ್ಟರು, ಇಡಿ ರನನ್ನ ಗದಾಯುದ್ಧ ಕೃತಿಯನ್ನು ಸಂಪಾದನೆ ಮಾಡಿದ್ದಾರೆ. ತೀ.ನಂ.ಶ್ರೀ.ಯವರ ಕೃತಿಯಲ್ಲಿ ಕೆಲವು ಪ್ರಮುಖ ಭಾಗಗಳನ್ನು ಸಂಗ್ರಹಿಸಿ ಪ್ರಕಟಿಸಿದರು.

ಆದ್ದರಿಂದ ಇದರ ಶೀರ್ಷಿಕೆ 'ಗದಾಯುದ್ಧ ಸಂಗ್ರಹಂ' ಎಂದು ಕರೆದರು. ಎಂ.ಎ. ರಾಮಾನುಜಯ್ಯಂಗಾರರು ಸಂಪಾದಿಸಿದ ಗದಾಯುದ್ಧವು ಮೂರು ಆವೃತ್ತಿಗಳನ್ನು ಕಂಡಿತು. ತೀ.ನಂ.ಶ್ರೀಯವರು ತಮ್ಮ ಸಂಪಾದನೆಗೆ ರಾಮಾನುಜಯ್ಯಂಗಾರರು ಮೂರು ಆವೃತ್ತಿಗಳಲ್ಲದೆ ರಾಮಾನುಜಯ್ಯಂಗಾರ್ಯರೇ ಬಳಸಿಕೊಂಡಿದ್ದ ಹಸ್ತಪ್ರತಿಗಳನ್ನಲ್ಲದೆ ರನ್ನನ ಪದ್ಯಗಳು ಉಲ್ಲೇಖಗೊಂಡಿರುವ ಹಿಂದಿನ ಕಾವ್ಯ ಸಂಕಲನಗಳನ್ನು ಹಾಗೂ ಬಿ.ಎಂ.ಶ್ರೀ. ಅವರ ಗದಾಯುದ್ಧ ನಾಟಕವನು ಕೆಲವು ಗದಾಯುದ್ಧಕ್ಕೆ ಸಂಬಂಧಪಡುವ ಸಂಸ್ಕೃತ ಆಕರಗಳನ್ನು ತೀ.ನಂ.ಶ್ರೀ.ಯವರು ತಮ್ಮ ಸಂಪಾದನ ಸಾಮಗ್ರಿಯಾಗಿ ಬಳಸಿಕೊಂಡಿದ್ದಾರೆ.

ರನ್ನನ ಗದಾಯುದ್ಧ ಕಾವ್ಯವನ್ನು ತೀ.ನಂ.ಶ್ರೀಯವರು ಸಂಪಾದಿಸಲು ಕಾರಣವೇನೆಂದರೆ ಪ್ರಾಚೀನ ಕಾವ್ಯದಲ್ಲಿ ಉಂಟಾದ ಆಸಕ್ತಿ ಹೆಚ್ಚಿನ ಅಧ್ಯಯನ ಪರಿಶ್ರಮವೆಂದು ಹೇಳಬಹುದು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹತ್ತನೆಯ ಶತಮಾನವನ್ನು 'ಸುವರ್ಣಯುಗ' ವೆಂದು ಕರೆಯುತ್ತಾರೆ. ಇದಕ್ಕೆ ಕಾರಣರಾದವರು ಪಂಪ, ಪೊನ್ನ, ರನ್ನರೇ ರನ್ನನ ಜೀವನ ಚರಿತ್ರೆಗೆ ಸಂಬಂಧಿಸಿದ ಅನೇಕ ವಿಚಾರಗಳು ಅವನ ಉಪಲಬ್ಧ ಕೃತಿಗಳಿಂದಲೂ 'ಸಾಹಸ ಭೀಮ ವಿಜಯಂ' ಮತ್ತು 'ಅಜಿತ ತೀರ್ಥಂಕರ ಪುರಾಣ ತಿಲಕಂ' ಕೃತಿಗಳಿಂದಲೂ ದೊರೆಯುತ್ತದೆ.

''ರನ್ನನ ಜನ್ಮಸ್ಥಳ ಜಮಖಂಡಿ ತಾಲ್ಲೂಕಿನ ಮುದುವೊಳಲ್ ಎಂಬುದೇ ರನ್ನನ ಜನ್ಮಸ್ಥಳ. ತಂದೆ ಜಿನವಲ್ಲಭ, ತಾಯಿ ಅಬ್ಬಲಬ್ಬೆ, ರನ್ನ ಜೈನಧರ್ಮೀಯನಾದರೂ ವೈಶ್ಯಜಾತಿಯವನು. ಈತನ ವೃತ್ತಿ ಬಳೆಗಾರ, ಚಿಕ್ಕಂದಿ ಂದಲೂ ಅಧ್ಯಯನದಲ್ಲಿ ತೊಡಗಿದ ರನ್ನ ಕವಿಯಾದುದು ಒಂದು ವಿಶೇಷ. ಇವನ ಪುಣ್ಯ ವಿಶೇಷದಿಂದ ರಾಜಾಶ್ರಯ ದೊರಕಿತು. ಮೊದಲಿಗೆ ಗಂಗರ ಮಂತ್ರಿ ಚಾವುಂಡರಾಯನ ಆಶ್ರಯ ಸಿಕ್ಕಿತು. ಅದೇ ರೀತಿ ಗಂಗರ ರಾಜ ಗುರುಗಳಾದ ಅಜಿತ ಸೇನಾಚಾರ್ಯರು ಇವರಿಗೆ ಗುರುಗಳಾಗಿ ದೊರೆತದ್ದು ಇವನಲ್ಲಿದ್ದ ಧಾರ್ಮಿಕ ಆಸಕ್ತಿ ಬೆಳೆಯಲು ಕಾರಣವಾಯಿತು.''[೧೪]

ಗುರುಗಳ ಮೇಲೆ ಪ್ರೀತಿಯಿಂದಲೇ ರನ್ನ 'ಅಜಿತ ತೀರ್ಥಂಕರರ ಪುರಾಣ ತಿಲಕಂ' ಎಂಬ ಕೃತಿಯನ್ನು ಬರೆದ. ರನ್ನನು ಚಾವುಂಡರಾಯನ ನೆರವಿನಿಂದ ಸಕಲವಿದ್ಯಾ ಪಾರಂಗತನಾಗಿದ್ದ. ರನ್ನನು ಗಂಗ ರಾಜ್ಯದಿಂದ ಹಿಂದಿರುಗಿ ಬಂದು ಚಾಳುಕ್ಯರಾಜ ತೈಲಪನ ಆಶ್ರಯ ಪಡೆದ. ತೈಲಪನ ಮಗನಾದ 'ಸತ್ಯಾಶ್ರಯ ಇರಿವ ಬೆಂಡಂಗನ' ಆಶ್ರಯದಲ್ಲಿಯೂ ರನ್ನ ಮಂತ್ರಿಯಾಗಿ ಇದ್ದನು. ಇದರಿಂದ ರನ್ನನಿಗೆ ಮೊದಲಿಂದಲೂ ರಾಜರ ಪ್ರೋತ್ಸಾಹ ದೊರಕಿತ್ತೆಂಬುದು ಇದರಿಂದ ವ್ಯಕ್ತವಾಗುತ್ತದೆ. ರನ್ನನ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಗಂಗ ಮಂತ್ರಿಯ ಪಾತ್ರ ಅತ್ಯಂತ ಪ್ರಮುಖವಾದುದು. ಇದಲ್ಲದೆ ತೈಲಪನಿಂದ ಕವಿಚಕ್ರವರ್ತಿ ಎಂಬ ಬಿರುದು ಕೂಡ ದೊರಕಿತು. ರನ್ನನ ಪೋಷಕರಲ್ಲಿ ಚಾವುಂಡರಾಯ ತೈಲಪರಂತೆಯೇ ಅತ್ತಿಮಬ್ಬೆಯೂ ಮುಖ್ಯಳಾಗಿದ್ದಾಳೆ. ಚಕ್ರವರ್ತಿಗಳಲ್ಲಿ ತೈಲಪ ಶ್ರೇಷ್ಠನಾಗಿರುವಂತೆ ದಾನದಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆ ಹಾಗೆ ಎಂಬುದು ಕವಿಯ ಹೇಳಿಕೆ.

''ಎಂ.ಎ. ರಾಮಾನುಜಯ್ಯಂಗಾರ್‌ರವರು ಕನ್ನಡದ ಗ್ರಂಥಸಂಪಾದನ ಕ್ಷೇತ್ರದಲ್ಲಿ ಅವರ ಪಾತ್ರ ಬಹಳ ಪ್ರಮುಖವಾದುದು ಎಂದು ಹೇಳಬಹುದು. ಇವರು

ರನ್ನನ ಕಾಲವನ್ನು ಸತ್ಯಾಶ್ರಯನನ್ನು ಸಮೀಕರಿಸಿ ಸಾಹಸಭೀಮವಿಜಯವನ್ನು ಬರೆದಿದ್ದರಿಂದ ಅದರ ಕಾಲ ೧೦೦೫ ಎಂದು ಗುರುತಿಸುತ್ತಾರೆ.''[೧೫] ರನ್ನ ತನ್ನ ಗದಾಯುದ್ಧದಲ್ಲಿ ವ್ಯಾಸ - ವಾಲ್ಮೀಕಿಗಳನ್ನು ಕಾಳಿದಾಸ-ಬಾಣನನ್ನು ನೆನೆಯುತ್ತಾನೆ. ಗದಾಯುದ್ಧ ತೈಲಪನ ಮಗನಾದ ಸತ್ಯಾಶ್ರಯ ಇರಿವ ಬೆಡಂಗನ ಕಾಲದಲ್ಲಿ ರಚಿತವಾದುದರಿಂದ ಈತನ ಕಾಲವನ್ನು ೧೦೦೫ ಎಂದು ವಿದ್ವಾಂಸರು ಪತ್ತೆಹಚ್ಚುತ್ತಾರೆ.

ರನ್ನನು ರಚಿಸಿರುವ ಕೃತಿಗಳಲ್ಲಿಯೇ 'ಸಾಹಸಭೀಮವಿಜಯ' (ಗದಾಯುದ್ಧ) ಅತೀ ಮುಖ್ಯವಾದುದು. ಈ ಕಾವ್ಯದಲ್ಲಿ ಭೀಮ ದುರ್ಯೋಧನರ ಗದಾಯುದ್ಧವೇ ಕೇಂದ್ರ ಬಿಂದು. ಈ ಕೃತಿಗೆ 'ಸಾಹಸಭೀಮ ವಿಜಯಂ' ಎಂದು ಹೆಸರಿಟ್ಟರು. ಗದಾಯುದ್ಧವೆಂದೇ ಖ್ಯಾತಿ. ಮಹಾಭಾರತದ ಭೀಮನೊಡನೆ ತನ್ನ ಆಶ್ರಯದಾತನಾದ ಸತ್ಯಾಶ್ರಯ ಇರಿವ ಬೆಡಂಗನನ್ನು ಅಭೇಧ ಕಲ್ಪಿಸಿದ್ದು ಈಕೃತಿಯ ಇನ್ನೊಂದು ವಿಶೇಷ. ಹೀಗಾಗಿ ಅಜಿತ ಪುರಾಣ ಮತ್ತು ಸಾಹಸಭೀಮ ವಿಜಯಗಳು ರನ್ನನ ಸುವಿಖ್ಯಾತ ಕಾವ್ಯಗಳಾಗಿವೆ. ಇವುಗಳಲ್ಲಿ ಒಂದು ಧಾರ್ಮಿಕ ಇನ್ನೊಂದು ಲೌಕಿಕ. ರನ್ನನ ಸಾಹಸಭೀಮವಿಜಯಕ್ಕೆ 'ವ್ಯಾಸಭಾರತ', ಭಾಸನ 'ಊರುಭಂಗ', ಭಟ್ಟನಾರಾಯಣನ 'ವೇಣಿ ಸಂಹಾರ', 'ಪಂಪಭಾರತ' ಇದಿಷ್ಟು ಆಕರಗ್ರಂಥಗಳಾಗಿವೆ ಎಂದು ಹೇಳಬಹುದು. ರನ್ನನ ಗದಾಯುದ್ಧದಲ್ಲಿ ಮೊದಲಿನಿಂದ ಕೊನೆಯವರೆಗೂ ಕಾಣಿಸಿಕೊಳ್ಳುವ ಪಾತ್ರಗಳು ಭೀಮ-ದುರ್ಯೋಧನರ ಪಾತ್ರ. ಇದು ಗದಾಯುದ್ಧ ಕಾವ್ಯಕ್ಕೆ ಒಂದು ವಿಶಿಷ್ಟ ಸಂವಿಧಾನವಿದೆ. ಅದು ನಾಟಕದ ಸಂವಿಧಾನ. ರನ್ನ ತನ್ನ ಕಾವ್ಯದಲ್ಲಿ 'ಸಿಂಹಾವಲೋಕನ' ಕ್ರಮವನ್ನು ಅನುಸರಿಸಿದ್ದಾನೆ. ತೀ.ನಂ.ಶ್ರೀಯವರು ಗದಾಯುದ್ಧ ಕಾವ್ಯದಲ್ಲಿ ವ್ಯಕ್ತವಾಗಿರುವ ನಾಟಕೀಯ ಕ್ರಮವನ್ನು ನೋಡಿ ತಮ್ಮ ಗುರುಗಳ ಕಾವ್ಯವಾದ ಗದಾಯುದ್ಧ ನಾಟಕಂ ಕೃತಿ ಜ್ಞಾಪಕ ಬಂತು ಎಂದು ಒಂದು ಕಡೆ ತೀ.ನಂ.ಶ್ರೀಯವರು ಹೇಳಿಕೊಂಡಿದ್ದರು.

ತೀ.ನಂ.ಶ್ರೀಯವರು ಪಾಠ ಪರಿಷ್ಕರಣದ ಮಾಡಿದ ಗ್ರಂಥದ ಉದಾಹರಣೆ ಈ ಕೆಳಕಂಡಂತೆ ಇದೆ.

"ಉದಾ: ಮಾನಧನನೆ ಸಿ ಜನ್ನಭಿ
ಮಾನಕ್ಷತಿ ಮಾಡಿದೈ ಸುಯೋಧನ 'ನೀಂಮು'
ತ್ತೀ ನೀರೊಳಗೆ 'ಸೆದೆ' ಕ್ರ್ಕಂ
ಮೀ ನಿರ್ಕುಂ ಕಪ್ಪೆಯಿರ್ಕುಮಿರ್ಪರೆ ಗಂಡರ್‌॥''[೧೬]

(ಗದಾಯುದ್ಧ ಪದ್ಯ-೨-೬)

ಈ ಮೇಲಿನ ಪದ್ಯಕ್ಕೆ ಅನುಗುಣವಾಗ ಪಾಠ ಪರಿಷ್ಕರಣೆ ಮಾಡಿದವರು ತೀ.ನಂ.ಶ್ರೀಯವರು. ಆದರೆ ಇವರಿಗಿಂತ ಮುಂಚೆ ಸಂಪಾದಿಸಿ ಪ್ರಕಟಿಸಿದ ಎ.ಎ. ರಾಮಾನುಜಯ್ಯಂಗಾರ್ಯರು ಮತ್ತು ವಿದ್ವಾನ್ ಕೆ.ವಿ. ಕೃಷ್ಣಭಟ್ಟರು ಪಾಠಾಂತರಗಳನ್ನು ಸೂಚಿಸಿಲ್ಲ. ಆದರೆ ತೀ.ನಂ. ಶ್ರೀಯವರು ಮಾತ್ರ ಈ ಗದಾಯುದ್ಧ ಸಂಗ್ರಹಕ್ಕೆ ಉತ್ತಮ ಪಾಠ ಪರಿಷ್ಕರಣೆ ಮಾಡಿರುವುದು ಅವರ ಕೃತಿಯಿಂದ ಕಾಣಬಹುದಾಗಿದೆ.

ತೀ.ನಂ.ಶ್ರೀಯವರ ಪಾಠಪರಿಷ್ಕರಣ ಮೇಲಿನ ಪದ್ಯಕ್ಕೆ ಅನುಗುಣವಾಗಿ ಕಾಣಬಹುದು. ಈ ಪಾಠವನ್ನು ತೀ.ನಂ.ಶ್ರೀಯವರು ಸ್ವೀಕರಿಸುವ ಬದಲು ಅವರು ಶ್ರೀಯವರ 'ಗದಾಯುದ್ಧ ನಾಟಕ'ದ ಪಾಠವಾದ ನೀಂ (ಮ) ಎಂಬುದನ್ನು ಅಂಗೀಕರಿಸಿದ್ದಾರೆ. ಮದ್ರಾಸ್ ಪ್ರತಿಯಲ್ಲಿ ಈ ಜಾಗದಲ್ಲಿ ತ್ರುಟಿತವಾಗಿದೆ. ಸಡಿ ಎಂದು ಶ್ರೀಯವರ ಮತ್ತು ಕೆ.ಎ. ೫೦ (ಓ.ಲೈ.ಮೈ) ಪಾಠವನ್ನು ಅವರು ಒಪ್ಪಿದ್ದಾರೆ. ಇದು ಸೂಕ್ತ ಸರಿಯಾಗಿಯೇ ಇದೆ. ಇದಕ್ಕೆ ಒಂದು ಓಲೆಯ ಪ್ರತಿಯ ಆಧಾರವೂ ಇದೆ.

ಶ್ರೀ ಯವರ ಪಾಠಾಂತರವಾದ ನೀಂ (ಮ) ಎಂಬುದನ್ನು ವಿಮರ್ಶಿಸಿರಬೇಕು. ಸುಯೋಧನ ನಿನ್ನ ಅಭಿಮಾನಕ್ಕೆ ಹಾನಿಯನ್ನು ನೀನು ಮಾಡಿದೆ. ಮತ್ತೆ ಈ ನೀರಿನಲ್ಲಿ ಏಡಿ, ಕಪ್ಪೆ ಮುಂತಾದವುಗಳು ಇರುತ್ತವೆ. ನಿನ್ನಂಥ ಶೂರರು ಇರುವರೇ ಎಂದು ಪದ್ಯದ ಅಭಿಪ್ರಾಯವೆಂದು ಹೇಳಿದರೆ ಮತ್ತೆ ಎಂಬುದಕ್ಕೆ ಏನು ಸಾರ್ಥಕತೆ ಇದೆ. ಅದು ಬಾರಿ ಪದಪೂರಣದಂತೆ ಇವೆ. ಆದ್ದರಿಂದ ನೀಂ (ಮ) ಎಂಬ ಯೋಜಿತಾಕ್ಷರವನ್ನು ಬಿಡಬಹುದು. ಇನ್ನೂ ಇರುವ ಪಾಠ ನೀ ಮು ಪಾಠದೋಷವಿರುವುದು ಇಲ್ಲಿ 'ನು' ಮತ್ತು 'ಮ' ಗಳಿಗೆ ರೂಪ ಸಾದೃಶ್ಯವಿದೆ. ಲಿಪಿಕಾರ 'ನು' ಎಂಬಾಕ್ಷರವನ್ನು 'ಮ' ಎಂದು ಓದಿರಬಹುದು. ಇನ್ನೊಬ್ಬ ಲಿಪಿಕಾರ ನೀರಿನಲ್ಲಿ ಇತರ ವಸ್ತುಗಳು ಇರುವ ಹಾಗೆಯೇ ಮುತ್ತೂ ಇರುತ್ತದೆ. ಎಂದು ಭಾವಿಸಿ ಆ 'ಮ' ವನ್ನು 'ಮು' ಗೆ ತಿದ್ದಿರಬಹುದು. ಆದ್ದರಿಂದ 'ಮು' ಗೆ ಬದಲಾಗಿ 'ನು' ವನ್ನು ಇಟ್ಟುಕೊಳ್ಳಬಹುದು.

'ಮು' ಎಂದು ಬರೆದ ಲಿಪಿಕಾರನೇ ನೀಂ ಎಂಬಲ್ಲಿನ ಬಿಂದುವನ್ನು ಸೇರಿಸಿರಬಹುದು. ಆದ್ದರಿಂದ ಬಿಂದುವನ್ನು ಬಿಟ್ಟು 'ಮು' ಗೆ ಪ್ರತಿಯಾಗಿ 'ನು' ವನ್ನು ಇಟ್ಟುಕೊಂಡು ಓದಿದರೆ ಅರ್ಥದ ಸ್ವಾರಸ್ಯ ಮಿಗಿಲಾಗುತ್ತದೆ. ನೀ (ನು) ತ್ತೀನೀರೊಳಗೆ ಎಂದರೆ ನೀನು ಈ ನೀರೊಳಗೆ ಇದ್ದು ಎಂದರ್ಥವಾಗಿ ಪಠ್ಯ ಸುಗಮವಾಗುತ್ತದೆ. ಈ ಪರಿಷ್ಕರಣವನ್ನು ಸೇರಿಸಿ ಈ ಕೆಳಕಂಡಂತೆ ಪಠ್ಯವನ್ನು ದೋಷಮುಕ್ತವಾಗಿ ಈ ರೀತಿ ಗುರುತಿಸಿದ್ದಾರೆ.

ಉದಾ : ಮಾನಧನನೆನಸಿ ನಿನ್ನಭಿ
ಮಾನಕ್ಷತಿ ಮಾಡಿದಯ್ ಸುಬೋಧನ ನೀ (ನು)
ತ್ತೀ ನೀರೊಳಗೆನಡಿರ್ಕುಂ
ಮಿನಿರ್ಕುಂ ಕಪ್ಪೆಯಿರ್ಕುಮಿರ್ಪರೆ ಗಂಡರ್ ॥

(ಗದಾಯುದ್ಧ ೨-೬ )

ಈ ಪರಿಷ್ಕರಣೆ ಆಧಾರವಾಗಿ ಲಿಪಿಕಾರ ಲೇಖನ ಸಂಭಾಷವ್ಯತೆಯುಂಟು ಅಂತಸ್ಸಂಭಾವ್ಯತೆಯೂ ಇದೆ. ಚಿಕ್ಕಸಮುತ್ತಳ್ ಎಂಬ ಅದೇ ಗ್ರಂಥದಲ್ಲಿರುವ ಶಬ್ದದಲ್ಲಿ ಕಾಣುವ ಉತ್ತಳ್ ಎಂಬ ಪ್ರಯೋಗ

ಉದಾ : ಅಂತವನಿಪ ನಿಕರಂ ಕೈ
ಯಾಂತವನಿಪನಿಕರದೊಂದು ಕೋಟೆಗೆಮಿಗಿಲೆಂ
ಬಂತಾದೊಡವೊಳ ಸೋರ್ಧಂದೆ
ಚಿಂತಿಸುದಾಂತಿ ಹಿಂಗುಮಗುಮಿರದ ಬೆಡಂಗುಂ

(ಗದಾಯುದ್ಧ೧-೧೫)

ಇದಕ್ಕೆ ಪಾಠಾಂತರಗಳಿಲ್ಲ. ಈಗಿರುವಂತೆ ಪದ್ಯದ ಅರ್ಥವನ್ನು ಹೇಳುವುದಾಗುವುದಿಲ್ಲ. ಎದುರಿಸಿದ ಅವನಿಪಕರ ಮತ್ತು ಕೈಯೊಡ್ಡಿದ ಅವನಿಪಕರ ಎಂದು ಅರ್ಥೈಸಿದರೆ ಏನು ಸ್ವಾರಸ್ಯವಿರುವುದಿಲ್ಲ. ಎರಡು ಸಲ ಅವನಿಪಕರ ಏಕೆ ಬರಬೇಕು. ಆದ್ದರಿಂದ ಇಲ್ಲಿ ಏನೋ ತಪ್ಪಿದೆ. ಹಳೆಯ ಲಿಪಿಕಾರರು ಈ ರೀತಿಯ ಚಿಹ್ನೆಯನ್ನು ಸಾಧಾರಣವಾಗಿ ಬರೆಯುತ್ತಿರಲಿಲ್ಲವೆಂದು ಹಿಂದೆಯೇ ಹೇಳಿದೆ. ಇದರಂತೆ ನೋಡಿದರೆ ವನೀಪನಿಕರ ಎಂದು ಓದಬಹುದು. ಆದರೆ ಛಂದಸ್ಸಿನ ದೃಷ್ಟಿಯಿಂದ ಒಂದು ಮಾತ್ರ ಅಧಿಕವಾಗುತ್ತದೆ. ಅದನ್ನು ಕಡಿಮೆ ಮಾಡಬೇಕು. ಎರಡನೇಯ 'ನಿ' ಎಂಬ ಅಕ್ಷರವನ್ನು ಯಾವ ಕ್ಲೇಶವೂ ಇಲ್ಲದೆ ಬಿಡಬಹುದು. ಅದು ನಕಾರ ಪುನರ್ಲೇಖನವಿರಬಹುದು. ವನೀಪಕರ ಎಂಬ ಪಾಠ ದೊರೆಯುತ್ತದೆ.

ಇದನ್ನು ಇಟ್ಟುಕೊಂಡರೆ ವನೀಪಕರಲೊಂದು ಎಂದಾಗ ವನೀಪಕರಣ ಎಂಬ ದ್ವಿತೀಯ ವಿಭಕ್ತ್ಯಂತ ಪರ ಲಭಿಸುತ್ತದೆ. ಆದರೆ ಇಲ್ಲಿ ಬೇಕಾದದ್ದು 'ಅಂತವನಿಪನಿಕರಂ' ಎಂಬಂಥ ಪ್ರಥಮ ವಿಭಕ್ತ್ಯಪರ 'ವನೀಪಕರು'ವೊಂದು ಎಂದು ಪ್ರಥಮ ವಿಭಕ್ತಿ ಪ್ರಾಪ್ತವಾಗುತ್ತದೆ. ವನೀಪಕರ ಎಂದರೆ ಬೇಡುವವ, ಯಾಚಕ ಎಂದರ್ಥ. ಇರಿವ ಬೆಂಗನು ಎದುರಾದ ರಾಜರನ್ನು ಇರಿಯುತ್ತಾನೆ.

ಕೈಚಾಚಿದ ಯಾಚಕರಿಗೆ ದಾನ ಮಾಡುತ್ತಾನೆ ಎಂಬ ಅರ್ಥವುಂಟಾಗುತ್ತದೆ. ಆದ್ದರಿಂದ ಇದು ಪರಿಷ್ಕೃತ ಪಾಠ.

ಉದಾ : "ಆಂತವ ನಿಪ ನಿಕರಂಪ್ಪೆ

ಯಾಂತವ (ನೀಪಕರು)ಲಂದು ಕೋಟೆಗೆ ಮಿಗಿಲೆಂ

ಬಂತಾದೊಡಲೊಳಸೋರದೆ

ಚಿಂತಿಸಿದಾಂತಿಉಗುಮಿಗುಮಿರಿವಬೆಂಡಂಗಂ !''[೧೭]

(ಗದಾಯುದ್ಧ ೧-೧೫)

ಎಂದು ಪರಿಷ್ಕರಣ ಮಾಡಬಹುದು. ರನ್ನ ಕವಿಯು ತನ್ನ ಬಿರುದುಗಳನ್ನು ಈ ಕೆಳಗಿನ ಪದ್ಯದ ಲ್ಲಿ ಈ ರೀತಿ ಹೇಳಿಕೊಂಡಿದ್ದಾನೆ.

ಉದಾ : ಗದಾಯುದ್ಧ (೧-೩೭)

"ಪಡೆಯಡೆಯ ಕಡೆಯ ಬ ಡವ

ಕುಡೆ ಪಡೆದೆನೋ ಚಕ್ರವರ್ತಿಯೊಳ್ಳೈಲಪನೊಳ್

ಪಡೆದಂ ಮಹಿಮೋನ್ನತಿಯಂ

ಪಡೆದುಂ ಕವಿಚಕ್ರವರ್ತಿತಿರಸಂ ರನ್ನ ॥''[೧೮]

ಅಂದರೆ 'ಕವಿ ಮುಖಚಂದ್ರ', 'ಕವಿಚಕ್ರವರ್ತಿ', 'ಕವಿರಾಜಶೇಖರ', 'ಕವಿರಾಜ', 'ಕವಿಜನ', 'ಚೂಡಾರತ್ನ', 'ಕವಿತಿಲಕ', 'ಕವಿಚತುರ್ಮುಖ' ಎಂಬ ಬಿರುದುಗಳು ಇತ್ತು ಎಂಬುದನ್ನು ಗದಾಯುದ್ಧದಲ್ಲಿ ಅತಿಶಯವಾಗಿ ಹೇಳಿಕೊಂಡಿದ್ದಾನೆ. ಕನ್ನಡ ಕಾವ್ಯದಲ್ಲಿ ಮೊದಲಬಾರಿಗೆ ನಾಟಕೀಯತೆಯನ್ನು ತನ್ನ ಕಾವ್ಯದಲ್ಲಿ ತಂದವನು ರನ್ನ. ಅದು ಅಲ್ಲದೆ ಅವನ ಕಾವ್ಯ ಸಿಂಹಾವಲೋಕನ ಕ್ರಮವನ್ನು ಅನುಸರಿಸಿರುವುದು ಇಲ್ಲಿ ಪ್ರಮುಖ ಗುಣವಾಗಿದೆ. ಗದಾಯುದ್ಧವೂ ಉತ್ತಮ ಕಾವ್ಯವಾಗಿದ್ದು ತೀ.ನಂ.ಶ್ರೀಯವರ ಮೆಚ್ಚುಗೆಗೆ ಪಾತ್ರವಾಗಿರುವುದನ್ನು ಅವರ ಸಂಗ್ರಹದ ಹಿನ್ನಲೆಯಲ್ಲಿ ತಿಳಿದುಕೊಳ್ಳಬಹುದು. ಈ ಮೇಲೆ ವಿವರಿಸಿದ ಕಾರ್ಯವಿಧಾನದಲ್ಲಿ ಗದಾಯುದ್ಧ ಕೃತಿಯು ಮೂಲಕ್ಕೆ ಹತ್ತಿರವಾದ ಪ್ರತಿಯನ್ನು ನಕಲು ಮಾಡಿಕೊಂಡು ಅದರಲ್ಲಿ ಇತರ ಪ್ರತಿಗಳ ಪಾಠಾಂತರಗಳನ್ನು ಗುರುತು ಮಾಡಿಕೊಂಡು ಪಾಠ ವಿಮರ್ಶೆ, ಪಾಠನಿರ್ಣಯ ಅದರಲ್ಲಿಯೇ ಉಚಿತ ಚಿಹ್ನೆಗಳಿಂದ ಗುರುತಿಸಿಕೊಂಡು ಕಚ್ಚಪ್ರತಿಯಾಗಿ ಮುದ್ರಣದ ಪ್ರತಿಯನ್ನು ಸಿದ್ಧಮಾಡಿರುವ ಗ್ರಂಥಸಂಪಾದನ ಕಾರ್ಯದ ಪ್ರಮುಖ ಹಂತಗಳನ್ನು ಕಾಣಬಹುದಾಗಿದೆ. ತೀ.ನಂ.ಶ್ರೀಯವರ ನಂಬಿಯಣ್ಣನ ರಗಳೆ ಹಾಗೂ ಗದಾಯುದ್ಧ

ಸಂಗ್ರಹ ಇವೆರಡು ಕೃತಿಗಳು ಕೂಡ ಕನ್ನಡ ಗ್ರಂಥಸಂಪಾದನೆಯ ಕ್ಷೇತ್ರಕ್ಕೆ ಮಾತ್ರವಲ್ಲದೆ ಕನ್ನಡ ಸಾಹಿತ್ಯಕ್ಕೂ ಅಭೂತಪೂರ್ವವಾದ ಅತ್ಯಂತ ಬೆಲೆಯುಳ್ಳ ಕೊಡುಗೆಯಾಗಿದೆ.

ಗದಾಯುದ್ಧ ಕ್ಕೆ ಒಂದು ವಿಶಿಷ್ಟ ಸಂವಿಧಾನವಿದೆ. ಅದು ನಾಟಕ ಸಂವಿಧಾನ. ಅದರಲ್ಲಿ ಅನೇಕ ದೃಶ್ಯಗಳಿವೆ. ನಿರ್ದಿಷ್ಟ ಸ್ಥಳ ಮತ್ತು ಕಾಲಗಳಲ್ಲಿ ನಡೆಯುವುದರಿಂದ ತ್ರಿಯೈಕ್ಯವೊಂದು ಲಭಿಸಿದೆ. ಆದ್ದರಿಂದ ರನ್ನನ ಈ ಕೃತಿ ಏಕಕಾಲದಲ್ಲಿ ದೃಶ್ಯಕಾವ್ಯ, ಶ್ರಾವ್ಯನಾಟಕವೂ ಆಗಿದೆ. ರನ್ನನ ಈ ಅಪೂರ್ವ ನಾಟಕ ಪ್ರತಿಭೆಯನ್ನು ಗುರುತಿಸಿದ ಶ್ರೀಯವರು ಅದನ್ನು ನಾಟಕವಾಗಿ ಪರಿವರ್ತಿಸಿದರು. ಇದನ್ನು ಮನಗೊಂಡ ತೀ.ನಂ.ಶ್ರೀಯವರು ಈ ಕೃತಿಯನ್ನು ಅಂದರೆ ಪ್ರಾಚೀನ ಕೃತಿಯನ್ನು ಸಂಪಾದಿಸಿದರು.

ಕಲಾತ್ಮಕತೆಗೆ ಅದರ ನಾಟಕೀಯತೆ ಸಾಕಷ್ಟು ಕಾರಣವಾಗಿದೆ. ಪಾತ್ರಗಳ ಮೂಲಕ ಸನ್ನಿವೇಶಗಳನ್ನು ಅಭಿನಯಿಸಿ ತೋರಿಸುವ ಕಲೆ ಕವಿಗೆ ಕರಗತವಾಗಿದೆ. ಭಾವಾನುಭಾವಗಳನ್ನು ಮೂರ್ತಗೊಳಿಸುವುದರಲ್ಲಿ ಕೃತಿಯಲ್ಲಿ ಗಟ್ಟಿತನವಿದೆ. ಇದರಿಂದ ರನ್ನನಿಗೆ ಕಾವ್ಯ ಬರೆಯುವ ಮುನ್ನ ನಾಟಕ ಬರೆಯುವ ಹವಣಿಕೆಯು ಇತ್ತೆಂಬ ಸತ್ಯಾಂಶ ನಮಗೆ ತಿಳಿಯುತ್ತದೆ. ಆದರೆ ಈ ಗದಾಯುದ್ಧ ಕೃತಿಯಲ್ಲಿ ನಾಟಕೀಯತೆಯನ್ನು ರನ್ನ ಅನುಸರಿಸಬೇಕಾದರೆ ಸಂಸ್ಕೃತ ನಾಟಕಗಳ ಪ್ರಭಾವ ರನ್ನನ ಮೇಲೆ ಇದೆ ಎಂಬ ಅಂಶ ಗೊತ್ತಾಗುತ್ತದೆ. ಈ ಕೃತಿಯಲ್ಲಿ ಮುಖ್ಯವಾಗಿ ಭೀಮಸೇನನ ಪ್ರತಿಜ್ಞೆ ಬಹಳ ಮುಖ್ಯವಾದುದು. ಈ ಕೃತಿಗೆ ಭೀಮನ ಪಾತ್ರವೇ ಕೇಂದ್ರ ಬಿಂದು ಎಂದು ಹೇಳಬಹುದು. ಕಾವ್ಯದಲ್ಲಿ ಐಕ್ಯತೆಯನ್ನು ರೂಪಿಸಿರುವ ಅಂಶಗಳಲ್ಲಿ ಈ ಬಗೆಯ ರಚನೆಯ ಪಾತ್ರವೂ ಇದೆ ಎಂದು ತಿಳಿಯಬಹುದಾಗಿದೆ.

ಕಾವ್ಯದ ಆರಂಭದಲ್ಲಿಯೇ (೧-೪೫) ಹೇಳಿಕೊಂಡಿದ್ದಾನೆ

ಉದಾ : "ಒಳಪೊಕ್ಕು ನೊಡೆ ಭಾರತ !
ದೊಳಗಣ ಕಥೆಯಲ್ಲಮೀ ಗದಾಯುದ್ಧದೊಳಂ ॥
ತೊಳಕೊಂಡತ್ತೇನೆ ಸಿಂಹಾ ।
ವಳೋಕನಕ್ರಮದಿನಳೆಪಿದಂ ಕವಿರನ್ನಂ ॥"೧೯

(ಗದಾಯುದ್ಧ-೧-೪ರಲ್ಲಿ)

ಈ ತಂತ್ರವನ್ನು ಕವಿ ಪಾತ್ರಗಳ ಸಹಾಯದಿಂದಲೇ ತನ್ನ ಅಭಿವ್ಯಕ್ತಿಯನ್ನು ನೀಡಿದ್ದಾನೆ. ಮುಖ್ಯವಾಗಿ ಭೀಮ ಮತ್ತು ದುರ್ಯೋಧನರ ಪಾತ್ರಗಳ ಮೂಲಕ

ಪೂರ್ವಕಥಾ ಸೂಚನೆಗಳು ಬಿಚ್ಚಿಕೊಳ್ಳುವಂತೆ ಮಾಡಲಾಗಿದೆ. ಇದರಲ್ಲಿ ಮೊದಲನೆಯ ಪಾತ್ರವೂ ಭಾಗವಹಿಸಬಹುದು. ಇದರಿಂದ ಸದ್ಯದ ಸನ್ನಿವೇಷ ಅಥವಾ ಪಾತ್ರಪ್ರಜ್ಞೆಗೆ ಹಿನ್ನೆಲೆಯಾದಂತಾಗುತ್ತದೆ. ಆ ಮೂಲಕ ಆ ಸನ್ನಿವೇಷ ಮತ್ತು ಪಾತ್ರಗಳು ಮತ್ತಷ್ಟು ಪುಷ್ಟಿಗೊಂಡು ದಟ್ಟವಾಗಲು ಸಾಧ್ಯವಾಗುತ್ತದೆ. ಇಡೀ ಕಾವ್ಯ ಒಂದು ಶಿಲ್ಪವಾಗುವಂತೆ ನೋಡಿಕೊಳ್ಳುವುದರಲ್ಲಿ ಇದರ ಕೈವಾಡವೇ ಹೆಚ್ಚು.

"ಕಾವ್ಯದ ಮಹತ್ತಿಗೆ ದುರ್ಯೋಧನನ ಪಾತ್ರ ಚಿತ್ರಣವೂ ಒಂದು ಕಾರಣ. ರನ್ನನ ಕಾವ್ಯದಲ್ಲಿ ಬರುವ ದುರ್ಯೋಧನ ಮಹಾನುಭಾವ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಅವನ ಹಿಂದಿರುವ ಕೆಲವು ಕೆಟ್ಟಗುಣಗಳನ್ನು ಪ್ರಶಂಶಿಸುತ್ತಾನೆ. ಪಂಪ ಭಾರತಕ್ಕೆ ಗದಾಯುದ್ಧಕ್ಕೂ ಗಣ್ಯವಾದ ಕೆಲವು ವ್ಯತ್ಯಾಸಗಳಿವೆ."[೨೦] ಪಂಪನಲ್ಲಿ ಕೌರವ ಪಕ್ಷಪಾತಿಯಾಗಿ ತೋರಿದ್ದಾನೆ. ಗದಾಯುದ್ಧದಲ್ಲಿ ಸಂಜಯನು ಕೌರವನಲ್ಲಿ ಸಹಾನುಭೂತಿಯನ್ನು ಮರುಕವನ್ನೂ ತೋರಿದವರೂ ಪಾಂಡವರ ಬಗ್ಗೆ , ದ್ರೋಣಾದಿಗಳ ಬಗ್ಗೆ ಆದರವನ್ನು ಒಳ್ಳೆಯ ಭಾವನೆಯನ್ನು ವ್ಯಕ್ತಪಡಿಸುತ್ತಾನೆ. ದುರ್ಯೋಧನನ ಅವಿವೇಕವನ್ನರಿತು ಅದನ್ನು ತಿದ್ದಬೇಕೆಂಬ ವಿಫಲ ಪ್ರಯತ್ನವೂ ಸಂಜಯನಿಂದ ಆಗಿದೆ. ಹೀಗೆ ಸಂಜಯನ ಪಾತ್ರ ದೃಷ್ಟಿಯಲ್ಲಿಯೂ ರನ್ನನು ತನ್ನ ಕೈವಾಡವನ್ನು ತೋರಿಸಿರುವನೆಂದು ತಿಳಿದು ಬರುತ್ತದೆ.

ಭೀಮನು ದ್ರೌಪದಿಯನ್ನು ಕುರಿತು ಹೇಳುವ ಒಂದು ಪದ್ಯ ಈ ಕೆಳಕಂಡಂತೆ ಇದೆ.

ನೀನಗ್ನಿ ಪುತ್ರಿಯಮ್ ಪವ।
ಮಾನ ತನೂಭವನೆನಾಬಣಂ ಕೂಡೆ ಸುಸಂ॥
ಧಾನಮಂನ್ರಪರೊಳೆಂತನ ।
ಲಾನಿಲ ಸಂಯೋಗ ಮುರಿಪದಿರ್ಕುಮೆ ಪಗೆಯಂ ॥

(ಗದಾಯುದ್ಧ ೧-೬೬)

ಇದರ ಅರ್ಥ ಈ ರೀತಿ ಇದೆ.

ನೀನು ಬೆಂಕಿಯ ಮಗಳು, ನಾನಾದರೋ ಗಾಳಿಯ ಮಗ, ನೀನೂ ನಾನೂ ಒಂದಾಗಿರುವಾಗ ಶತ್ರುಗಳೊಡನೆ ಹೇಗೆ ಸಂಧಿಕಾರ್ಯ ನಡೆದೀತು ? ಬೆಂಕಿ ಉರಿದೆದ್ದಾಗ ಬಿರುಗಾಳಿ ಬೀಸಿದಾಗ ಶತ್ರುಗಳ ಸರ್ವನಾಶ ಶತಸ್ಸಿದ್ಧವಲ್ಲವೇ? ಈ ಪದ್ಯದಲ್ಲಿ ಭೀಮನ ಆವೇಷ ಹಾಗೂ ಕೋಪಗಳನ್ನು ಪ್ರತಿಬಿಂಬಿಸುವಂತಹುದನ್ನು ನಾವು ಕಾಣಬಹುದಾಗಿದೆ.

ಇದರ ಜೊತೆಗೆ ಭೀಮನ ಪ್ರತಿಜ್ಞೆಯ ಪದ್ಯ ಈ ಕೆಳಕಂಡಂತೆ ಇದೆ.

ಕುರುನಂದರಂ ಕೊಂದೆಂ
ಕುರುಳಾಬಾನುಜನ ನೆತ್ತರಂ ಕುಡಿದೆಂವೊ ।
ಣ್ಣೆರಡಂ ತೀರ್ಚಿದೆ ನಿರ್ದಪು ।
ಲೆರಡಮವಂ ತೀರ್ಚಿ ತೀರ್ಚಿದಿರ್ಪೆನೆ ಪಗೆಯಂ ॥



( ಗದಾಯುದ್ಧ ೧-೬೯)

ಭೀಮ ದ್ರೌಪದಿಗೆ ಹೇಳುವ ವೂತು. ಈ ರೀತಿ ಆರ್ಥೈಸಬಹುದಾಗಿದೆ. ಕುರುನಂದರನ್ನೆಲ್ಲಾ ಕೊಂದಿದ್ದೇನೆ. ನಗೆ ಅಪಮಾನಗೊಳಿಸಿದ ದುಶ್ಶಾಸನ ಬಿಸಿನೆತ್ತರನ್ನು ಬಸಿದಿದ್ದೇನೆ. ಮಾಡಿದ ಪ್ರತಿಜ್ಞೆಗಳಲ್ಲಿ ಎರಡನ್ನು ಪೂರೈಸಿರುವೆನು. ಆದರೆ ಇನ್ನೂ ಎರಡು ಪ್ರತಿಜ್ಞೆ ವೂತ್ರ ಉಳಿದಿದೆ. ಅದು ಯಾವುದೆಂದರೆ ದುರ್ಯೋಧನನ ತೊಡೆ ಮುರಿಯುವುದು, ಆತನ ಕಿರೀಟವನ್ನು ತುಳಿದು ನುಚ್ಚುನೂರು ಮಾಡುವುದೆಂಬ ಎರಡು ಪ್ರತಿಜ್ಞೆ ಮಾತ್ರ ಉಳಿದಿದೆ. ಅವನ್ನು ಪೂರೈಸುವೆನು ಎಂದು ಹೇಳುತ್ತಾನೆ.

ಈ ರೀತಿಯಾಗಿ ರನ್ನಕಾವ್ಯವು ಒಂದು ನಾಟಕೀಯ ಸನ್ನಿವೇಷವನ್ನು ಪರಿಚಯಿಸುತ್ತದೆ. ತೀ.ನಂ.ಶ್ರೀಯವರು ಈ ಕಾವ್ಯವನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಇದರಲ್ಲಿ ಅನೇಕ ದೋಷಗಳನ್ನು ಗುರುತಿಸಿ ಓದುಗರಿಗೆ ಅನುಕೂಲವಾಗುವಂತೆ ಸಂಗ್ರಹಮಾಡಿಕೊಟ್ಟಿದ್ದಾರೆ.

## ಅಡಿಟಿಪ್ಪಣಿಗಳು

| | | |
|---|---|---|
| ೧. | ಪ್ರೊ. ಎಚ್.ಜಿ. ಸಣ್ಣಗುಡ್ಡಯ್ಯ | : 'ತೀ.ನಂ.ಶ್ರೀಕಂಠಯ್ಯ', ಅಕ್ಷಯ ಪ್ರಕಾಶನ, ಪು.ಸಂ. ೩೫, ತುಮಕೂರು - ೨೦೦೪. |
| ೨. | ಎಂ.ಎ. ರಾಮಾನುಜೈಯ್ಯಂಗಾರರು | : 'ಗದಾಯುದ್ಧ', ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಪು.ಸಂ. ೩೧, ಮೈಸೂರು ೧೮೯೫. |
| ೩. | ಪ್ರೊ. ಎಚ್.ಜಿ. ಸಣ್ಣಗುಡ್ಡಯ್ಯ | : 'ತೀ.ನಂ.ಶ್ರೀಕಂಠಯ್ಯ', ಅಕ್ಷಯ ಪ್ರಕಾಶನ, ಪು.ಸಂ. ೩೫-೩೬, ತುಮಕೂರು - ೨೦೦೪. |
| ೪. | ಡಾ. ಎಂ. ಚಿದಾನಂದಮೂರ್ತಿ | : 'ಶ್ರೀಕಂಠತೀರ್ಥ' ಐ.ಬಿ.ಎಚ್.ಪ್ರಕಾಶನ, ಪು.ಸಂ. ೧೮೯, ಬೆಂಗಳೂರು, ೧೯೭೬ |
| ೫. | ಪ್ರೊ. ಎಚ್.ಜಿ. ಸಣ್ಣಗುಡ್ಡಯ್ಯ | : 'ತೀ.ನಂ.ಶ್ರೀಕಂಠಯ್ಯ', ಅಕ್ಷಯ ಪ್ರಕಾಶನ, ಪು.ಸಂ. ೩೫, ತುಮಕೂರು , ೨೦೦೪. |
| ೬. | ವಿವಿಧ ಲೇಖಕರು | : 'ಕನ್ನಡ ಸಾಹಿತ್ಯ ಚರಿತ್ರೆ', ಕನ್ನಡ ಸಾಹಿತ್ಯ ಪರಿಷತ್ತು, ಪು.ಸಂ. ೨೬೯, ಬೆಂಗಳೂರು ೧೯೯೯. |
| ೭. | ಡಾ. ಡಿ.ಎಲ್.ಎನ್ | : 'ಕನ್ನಡ ಗ್ರಂಥ ಸಂಪಾದನೆ' ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಪುಸಂ. ೧೮೮, ಮೈಸೂರು, ೧೯೬೪. |
| ೮. | ಡಾ. ಡಿ.ಎಲ್.ಎನ್ | : 'ಕನ್ನಡ ಗ್ರಂಥ ಸಂಪಾದನೆ' ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಪುಸಂ. ೧೮೮-೧೮೯, ಮೈಸೂರು, ೧೯೬೪. |
| ೯. | ವಿವಿಧ ಲೇಖಕರು | : 'ಕನ್ನಡ ಸಾಹಿತ್ಯ ಚರಿತ್ರೆ', ಕನ್ನಡ ಸಾಹಿತ್ಯ ಪರಿಷತ್ತು, ಪು.ಸಂ. ೨೬೮, ಬೆಂಗಳೂರು ೧೯೯೯. |
| ೧೦. | ತೀ.ನಂ.ಶ್ರೀಕಂಠಯ್ಯ | : 'ನಂಬಿಯಣ್ಣನ ರಗಳೆ' ಕಾವ್ಯಾಲಯ ಪ್ರಕಾಶಕರು, ಜಯನಗರ, ಪು.ಸಂ. ೧೫, ಮೈಸೂರು, ೧೯೪೬. |

೧೧. ವಿವಿಧ ಲೇಖಕರು : 'ಕನ್ನಡ ಸಾಹಿತ್ಯ ಚರಿತ್ರೆ', ಕನ್ನಡ ಸಾಹಿತ್ಯ ಪರಿಷತ್ತು, ಪು.ಸಂ. ೧೩, ಬೆಂಗಳೂರು ೧೯೯೯.

೧೨. ವಿವಿಧ ಲೇಖಕರು : 'ಹರಿಹರ ವಿಚಾರ ಸಂಕಿರಣ', ಕನ್ನಡ ಸಾಹಿತ್ಯ ಪರಿಷತ್ತು, ಪು.ಸಂ. ೧೩, ಬೆಂಗಳೂರು, ೧೯೯೯.

೧೩. ವಿವಿಧ ಲೇಖಕರು : 'ಹರಿಹರ ವಿಚಾರ ಸಂಕಿರಣ', ಕನ್ನಡ ಸಾಹಿತ್ಯ ಪರಿಷತ್ತು, ಪು.ಸಂ. ೮೧, ಬೆಂಗಳೂರು, ೧೯೯೯.

೧೩. ವಿವಿಧ ಲೇಖಕರು : 'ಹರಿಹರ ವಿಚಾರ ಸಂಕಿರಣ', ಕನ್ನಡ ಸಾಹಿತ್ಯ ಪರಿಷತ್ತು, ಪು.ಸಂ. ೧೩೩, ಬೆಂಗಳೂರು, ೧೯೯೯.

೧೪. ಡಾ. ಬಾಳಣ್ಣ ಸೀಗೀಹಳ್ಳಿ : 'ಸಾಹಸಭೀಮ ವಿಜಯ - ಪರಾಮರ್ಶೆ', ಕರ್ನಾಟಕ ಸಾಹಿತ್ಯ ಆಕಾಡೆಮಿ, ಪು.ಸಂ. ೩, ಬೆಂಗಳೂರು ೨೦೦೪.

೧೫. ಎಂ.ಎ. ರಾಮಾನುಜೈಯ್ಯಂಗಾರರು : 'ಗದಾಯುದ್ಧ', ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಪು.ಸಂ. ೧೮, ಮೈಸೂರು ೧೯೯೫.

೧೬. ಡಾ. ಡಿ.ಎಲ್.ಎನ್ : 'ಕನ್ನಡ ಗ್ರಂಥ ಸಂಪಾದನೆ' ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಪುಸಂ. ೨೦೦, ಮೈಸೂರು, ೧೯೬೪.

೧೭. ಡಾ. ಡಿ.ಎಲ್.ಎನ್ : 'ಕನ್ನಡ ಗ್ರಂಥ ಸಂಪಾದನೆ' ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಪುಸಂ. ೧೮೮-೧೮೯,ಮೈಸೂರು, ೧೯೬೪.

೧೮. ಡಾ. ಡಿ.ಎಲ್.ಎನ್ : 'ಕನ್ನಡ ಗ್ರಂಥ ಸಂಪಾದನೆ' ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಪುಸಂ. ೧೮೮-೧೮೯,ಮೈಸೂರು, ೧೯೬೪.

೧೯. ಡಾ. ಡಿ.ಎಲ್.ಎನ್ : 'ಕನ್ನಡ ಗ್ರಂಥ ಸಂಪಾದನೆ' ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಪುಸಂ. ೨೦೨, ಮೈಸೂರು, ೧೯೬೪.

೨೦. ಡಾ. ಬಾಳಣ್ಣ ಸೀಗೆಹಳ್ಳಿ : 'ಸಾಹಸಭೀಮ ವಿಜಯ - ಪರಾಮರ್ಶೆ', ಕರ್ನಾಟಕ ಸಾಹಿತ್ಯ ಆಕಾಡೆಮಿ, ಪು.ಸಂ. ೩೩, ಬೆಂಗಳೂರು ೨೦೦೪.

# ಅಧ್ಯಾಯ - ನಾಲ್ಕು

## ತೀ.ನಂ.ಶ್ರೀಯವರ ಇತರೆ ಸಂಪಾದನೆಗಳು

ತೀ.ನಂ.ಶ್ರೀಯವರ ಬಿಡಿಪದ್ಯಗಳು ಈ ಕೆಳಕಂಡಂತೆ ಇವೆ.

೧. ಹೆಣ್ಣು ಮಕ್ಕಳ ಪದಗಳು

೨. ಕೆರೆಗೆ ಹಾರ

೩. ಎನಿತ್ತೆನಿತ್ತಂಬುಜ ಪತ್ರನೇತ್ರೆಯಾ

೪. ಅನಂತನಾಥ ಪುರಾಣ

೫. ರಸರತ್ನಾಕರ

ಈ ಮೇಲಿನ ಬಿಡಿ ಲೇಖನ ಅಥವಾ ಪದ್ಯಗಳನ್ನು ತೀ.ನಂ.ಶ್ರೀಯವರು ಸಂಪಾದಿಸಿ ಪ್ರಕಟಪಡಿಸದ್ದಾರೆ. ಇದರ ಬಗ್ಗೆ ವಿವರಗಳು ಈ ಕೆಳಕಂಡಂತೆ ಇದೆ.

### ೧. ಹೆಣ್ಣುಮಕ್ಕಳ ಪದಗಳು

''ತೀ.ನಂ.ಶ್ರೀಯವರು ೧೯೪೪ರಲ್ಲಿ ಮೈಸೂರಿನ ಅಕ್ಷರ ಪ್ರಚಾರ ಸಮಿತಿಯ, 'ವಯಸ್ಕರ ಸಮಿತಿಯ 'ವಯಸ್ಕರ ಶಿಕ್ಷಣದ ಪುಸ್ತಕ ಮಾಲೆಗೆ'', 'ಹೆಣ್ಣುಮಕ್ಕಳ ಪದಗಳು''ಎಂಬ ಚಿಕ್ಕ ಪುಸ್ತಕವನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಈ ಪುಸ್ತಕದ ಮೊದಲ ಮಾತಿನಲ್ಲಿ ತೀ.ನಂ.ಶ್ರೀಯವರು ಈ ರೀತಿಯಾಗಿ ಹೇಳಿದ್ದಾರೆ. ಹಳ್ಳಿಯ ಹಾಡುಗಳ ಸ್ವರೂಪ, ವೈವಿಧ್ಯ ಅವುಗಳ ಪ್ರಚಾರಕ್ಕೆ ಇರುವ ಅಗತ್ಯ, ಅವುಗಳ ಕಾವ್ಯಗುಣ, ಈ ಅಂಶಗಳನ್ನು ಕುರಿತು ಆಗ ತಾನೆ ಓದು ಕಲಿತ ಸಾಮಾನ್ಯ ಜನಕ್ಕೆ ಅರ್ಥವಾಗುವಂತೆ ಕೂಡಿದ, ತಿಳಿದ ಮಟ್ಟಿಗೂ ಸರಳ ಭಾಷೆಯಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ. ಈ ಕೃತಿಯು ಉತ್ತಮ ಜನಪದ ತ್ರಿಪದಿಗಳ ಸಂಗ್ರಹವಾಗಿದೆ.

ತೀ.ನಂ.ಶ್ರೀಯವರು ಈ ಪುಸ್ತಕದ ಸಂಪಾದನೆಯ ಮೂಲಕ ಆಗ ತಾನೇ ಓದು ಕಲಿತ ಸಾಮಾನ್ಯ ಜನಕ್ಕೆ ಅರ್ಥವಾಗುವಂತೆ ಹಳ್ಳಿಯ ಹಾಡುಗಳ ಸ್ವರೂಪವನ್ನು ಕುರಿತು ತಿಳಿಯಾದ ಭಾಷೆಯಲ್ಲಿ ಪರಿಚಯ ಮಾಡಿಕೊಟ್ಟಿರುವುದು ತೀ.ನಂ.ಶ್ರೀಯವರ ಘನವಾದ ಪಾಂಡಿತ್ಯಕ್ಕೆ ಉತ್ತಮ ನಿದರ್ಶನವಾಗಿದೆ. ಅದರೊಂದಿಗೆ ಹಳ್ಳಿಯ ಹಾಡುಗಳ ಸಹಜ ಸ್ವಭಾವವನ್ನು ಕುರಿತಾದ ಕೆಲವು ಮಾತುಗಳನ್ನು ಹಾಗೂ ಅವುಗಳ ಹಾಡುಗಾರಿಕೆ ಸ್ವರೂಪವನ್ನು ಕುರಿತು ತಿಳಿದ ಮಟ್ಟಿಗೆ ವಿವರಿಸಿದ್ದಾರೆ.

ಈ ಪುಸ್ತಕದ ಕೊನೆಯ ಭಾಗದಲ್ಲಿ ಯಾವ ಗ್ರಂಥಗಳಿಂದ ಪದ್ಯಗಳನ್ನು ಆರಿಸಿಕೊಂಡಿದೆ ಎಂಬುದನ್ನು ಸೂಚಿಸಿರುವುದು ಒಬ್ಬ ಸಂಪಾದಕನ ಶ್ರದ್ಧೆಯನ್ನು ಕುರಿತು ವಿವೇಚಿಸಬಹುದಾಗಿದೆ. ಇಂಥ ಗ್ರಂಥಗಳು ಯಾವುದೆಂದರೆ ಕನ್ನಡ ಜನಪದ ಸಾಹಿತ್ಯದಲ್ಲಿ ಇಂದಿಗೂ ಪ್ರಸಿದ್ಧವಾಗಿರುವ 'ಗರತಿಯ ಹಾಡು' ಈ ಕೃತಿ ಜಾನಪದ ತ್ರಿಪದಿಗಳ ಅತ್ಯುತ್ತಮ ಸಂಗ್ರಹವಾಗಿದೆ. ಈ ಕೃತಿಯನ್ನು ಮೊದಲು ಹಲಸಂಗಿ ಗೆಳೆಯರು ಸಂಪಾದನೆ ಮಾಡಿದ ಕೃತಿಯಾಗಿದೆ. ಈ ಹಲಸಂಗಿ ಗೆಳೆಯರಲ್ಲಿ ಮುಖ್ಯವಾಗಿ ಹಲಸಂಗಿ ಚೆನ್ನಮಲ್ಲಪ್ಪ ಗಲಗಲಿ (ಮಧುರಚೆನ್ನ) ಕಾಪಸೆ ರೇವಪ್ಪ, ಸಿಂಪಿಲಿಂಗಣ್ಣ, ಧೂಲಸಾಹೇಬ ಇತ್ಯಾದಿ ವಿದ್ವಾಂಸರುಗಳು ಮೊದಲು ಈ ಕೃತಿಯನ್ನು ಸಂಪಾದನೆ ಮಾಡಿದ್ದಾರೆ. ಇವರು ಸಂಪಾದಿಸಿರುವ ಕೃತಿ 'ಬರಿ ಹೆಣ್ಣುಮಕ್ಕಳ' ಜೀವನವನ್ನು ಕುರಿತಾಗಿದೆ. ಆದ್ದರಿಂದ ಇದರ ಹೆಸರುಗರತಿಯ ಹಾಡು ಎಂಬುದಾಗಿ ಕರೆದರು. ಇನ್ನೊಂದು ರೀತಿಯಲ್ಲಿ ಈ ಕೃತಿಯನ್ನು 'ಹಲಸಂಗಿ ಹಾಡು' ಎಂಬುದಾಗಿಯೂಕರೆಯುತ್ತಾರೆ. ಈ ಕೃತಿಯು ಅತ್ಯುತ್ತಮ ಜಾನಪದ ತ್ರಿಪದಿಗಳ ಸಂಗ್ರಹವಾಗಿದೆ.

''ತೀ.ನಂ.ಶ್ರೀಯವರು ಈ 'ಗರತಿಯ ಹಾಡು' ಎಂಬ ಕೃತಿಯಲ್ಲಿ ಕೆಲವು ಶ್ರೇಷ್ಠ ತ್ರಿಪದಿಗಳನ್ನು ಆರಿಸಿದ್ದಾರೆ. ಅದೇ ರೀತಿ 'ಹಳ್ಳಿಯ ಹಾಡುಗಳು' ಹಾಗೂ 'ನಾಡಪದಗಳು' ಮತ್ತು ಇತರ ಜಾನಪದ ಸಂಕಲನಗಳು''[9] ಇನ್ನೊಂದು ಮಾತಿನಲ್ಲಿ ಹೇಳುವುದಾದರೆ ತೀ.ನಂ.ಶ್ರೀಯವರು ಕ್ಷೇತ್ರಕಾರ್ಯದ ಮೂಲಕ ಜನಪದ ಸಾಹಿತ್ಯವನ್ನು ಸಂಗ್ರಹಿಸಲಿಲ್ಲ. ಹೀಗಾಗಿ ಅವರು ಜಾನಪದ ಸಾಹಿತ್ಯ ಸಂಗ್ರಹಕರ ಪಟ್ಟಿಗೆ ಸೇರುವುದಿಲ್ಲ. ಆದರೆ ಇವರು ಈ ಕೃತಿಯನ್ನು ಸಂಪಾದನೆ ಮಾಡುವುದಕ್ಕಿಂತ ಮುಂಚೆ ಕನ್ನಡ ಜಾನಪದ ಸಾಹಿತ್ಯದಲ್ಲಿ ಪ್ರಚಲಿತವಾದ ಕೆಲವು ಕೃತಿಗಳ ನೆರವು ಪಡೆದಿರುವುದನ್ನು ' ಈ ಹೆಣ್ಣುಮಕ್ಕಳ ಪದಗಳು' ಎಂಬ ಸಂಗ್ರಹದಿಂದ ಕಾಣಬಹುದಾಗಿದೆ.

ಈ ಮೇಲಿನ ಮೂರು ಆಕರ ಗ್ರಂಥಗಳಾದ 'ಗರತಿಯ ಹಾಡು' ಹಳ್ಳಿಯ ಹಾಡುಗಳು' 'ನಾಡಪದಗಳು' ಮತ್ತು ಇತರ ಸಂಕಲನಗಳಿಂದ ಉತ್ತಮವಾದ ತ್ರಿಪದಗಳನ್ನಾಧರಿಸಿ 'ಹೆಣ್ಣುಮಕ್ಕಳ ಪದಗಳು' ಎಂಬ ಜಾನಪದ ತ್ರಿಪದಿಗಳ ಸಂಕಲನವೊಂದನ್ನು ಸಂಪಾದಿಸಿ ಪ್ರಕಟಿಸಿರುವುದು ಈ ಜನಪದ ಸಾಹಿತ್ಯಕ್ಕೆ ತೀ.ನಂ.ಶ್ರೀಯವರು ತ್ರಿಪದಿ ಸಾಹಿತ್ಯದ ಸ್ವರೂಪವನ್ನು ಹಾಗೂ ಅವುಗಳ ಗೇಯ ಗುಣವನ್ನು ಕುರಿತು ಓದಿಲ್ಲದ ಸಾಮಾನ್ಯ ಹಳ್ಳಿಯ ಜನರಿಗೂ ಅರ್ಥವಾಗುವಂತಹ ರೀತಿಯಲ್ಲಿ ಸಂಪಾದಿಸಿ ಪ್ರಕಟಿಸಿರುವುದು ಹೆಮ್ಮೆಯ ವಿಷಯವಾಗಿದೆ. ಈ ಪುಸ್ತಕ ಮೂಲತಃ ತ್ರಿಪದಿಯ ಸಾಲುಗಳನ್ನು ಅಥವಾ ಮಾತುಗಳನ್ನು ಓದುವ ಕ್ರಮದಲ್ಲಿ ಬಿಡಿಸಿ

ತೋರಿಸಿರುವುದು ಒಂದು ಬಗೆಯ ಉತ್ತಮ ಸಂಪಾದಕನ ಕೆಲಸವಾಗಿದೆ. ಒಂದು ರೀತಿಯಲ್ಲಿ ತ್ರಿಪದಿ ಛಂದಸ್ಸಿನ ಸ್ವರೂಪವನ್ನು ಹಾಗೂ ಅದರ ದಾಟಿಯನ್ನು ಸಾಮಾನ್ಯ ಜನರಿಗೆ ಅರ್ಥಮಾಡಿಕೊಟ್ಟಂತಾಗಿದೆ. ಈ ಕೃತಿಯಲ್ಲಿ ಸಾಮಾನ್ಯ ಜನರಿಗೆ ಅರ್ಥವಾಗದಿರುವ ಪದಗಳಿಗೆ ಅರ್ಥವನ್ನು ಬರೆದಿರುವುದು ಒಬ್ಬ ಸಂಪಾದಕನ ವಿದ್ವತ್ತಿಗೆ ಪ್ರತೀಕವಾಗಿದೆ.

'' ಉದಾ : ಕೈಯಲಗು - ಕೈಯಲ್ಲಿ ಇರುವ ಕತ್ತಿ
ನಲ್ಲರುಳುಗಣ್ಣು - ಚೆನ್ನಾಗಿ ಅರಳಿದ ಹೂವಂಥ ಕಣ್ಣು
ಎರುವು - ಬೇಧ ವಿರೋಧ
ಉಂಗು - ಉಣ್ಣುವಳು....ಇತ್ಯಾದಿ''.[೩]

ಜನಪದ ಸಾಹಿತ್ಯವೆಂದರೆ ವಿದ್ವಾಂಸರು ತಿರಸ್ಕಾರದಿಂದ ಕಾಣುತ್ತಿದ್ದ ಅಂದಿನ ವರ್ಷಗಳಲ್ಲಿ ತೀ.ನಂ.ಶ್ರೀಯವರು ಈ ವಿಷಯದ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿದ್ದು ಈ ಕ್ಷೇತ್ರದಲ್ಲಿ ಕೆಲಸ ಮಾಡಿದವರಿಗೆ ಹೆಚ್ಚಿನ ಪ್ರೇರಣೆ ನೀಡಿದ್ದು ಬಹಳ ಮುಖ್ಯವಾದ ಅಂಶವಾಗಿದೆ. ಜಾನಪದ ಸಾಹಿತ್ಯಕ್ಕೆ ತೀ.ನಂ.ಶ್ರೀಯವರ ಕೊಡುಗೆ ಏನೆಂಬುದನ್ನು ವಿಚಾರ ಮಾಡುವಾಗ ಈ ಎಲ್ಲಾ ಅಂಶಗಳು ಅಗತ್ಯ ಎಂಬುದು ಗಮನಿಸಬೇಕಾಗುತ್ತದೆ.

''ಹೆಣ್ಣುಮಕ್ಕಳ ಪದಗಳು''ಈ ಕೃತಿಯಲ್ಲಿ ಮುಖ್ಯವಾಗಿ ಹೆಣ್ಣುಮಕ್ಕಳು ರಾಗಿ ಬೀಸುವಾಗ, ಮಕ್ಕಳನ್ನು ತೊಟ್ಟಿಲಲ್ಲಿ ಮಲಗಿಸಿ ತೂಗುವಾಗ ಹಾಗೂ ಕೆಲಸದ ದಣಿವಾರಿಸಿಕೊಳ್ಳುವಾಗ ರಚಿತವಾದುದನ್ನು ಸಂಪಾದನೆ ಮಾಡಿರುವುದಾಗಿಯೂ ತೀ.ನಂ.ಶ್ರೀಯವರು ತಿಳಿಸುತ್ತಾರೆ''.[೪] ಈ ಕೃತಿಯಲ್ಲಿ ಕಂಡುಬರುವ ತ್ರಿಪದಿಗಳನ್ನು ಕೇವಲ ಓದುವುದು ಮಾತ್ರವಲ್ಲದೆ ಹಾಡಲು ಬೇಕಾಗುವುದರಿಂದ ಹಾಡುವವರಿಗೆ ಅನುಕೂಲವಾಗಲೆಂದು ತ್ರಿಪದಿಯ ಮೂರು ಸಾಲುಗಳನ್ನು ನಾಲ್ಕು ಸಾಲುಗಳಾಗಿ ಮಾಡಿಕೊಂಡು ಹಾಡುವ ವಿಧಾನವನ್ನು ಸೂಚಿಸಿದ್ದಾರೆ. ತೀ.ನಂ.ಶ್ರೀಯವರಿಗೆ ಜನಪದ ಸಾಹಿತ್ಯದ ಬಗ್ಗೆ ಇರುವ ಅಭಿರುಚಿಯನ್ನು ಈ ಜನಪದ ಕೃತಿಯ ಸಂಗ್ರಹದ ಮೂಲಕ ಕಾಣಬಹುದಾಗಿದೆ.

ಈ ರೀತಿಯಾಗಿ ಜನಪದ ಸಾಹಿತ್ಯ ಹಾಗೂ ಅದರಲ್ಲಿ ಇರುವ ಗೇಯ ಗುಣವನ್ನು ಕುರಿತು ತೀ.ನಂ.ಶ್ರೀಯವರ ಮನಸ್ಸು ಪಕ್ವಗೊಂಡು ಈ ಸಾಹಿತ್ಯದ ಮೇಲೆ ಅಭಿರುಚಿ ಬೆಳೆದಿರಬೇಕು ಎಂದು ಗೊತ್ತಾಗುತ್ತದೆ. ಈ ರೀತಿಯಾಗಿ ತೀ.ನಂ.ಶ್ರೀಯವರು ತಮ್ಮ ಪಾಂಡಿತ್ಯವನ್ನು ಕೇವಲ ಶಿಷ್ಟಸಾಹಿತ್ಯಕ್ಕೆ ಮಾತ್ರ ಸೀಮಿತಗೊಳಿಸದೇ ಜನಪದ ಸಾಹಿತ್ಯದ

ಕಡೆಗೂ ಅದರ ಗಮನ ಸೆಳೆದಿರುವುದು ಬಹಳ ಮುಖ್ಯ ಅಂಶವಾಗಿದೆ. ಈ ಕೃತಿಯ ಹಿನ್ನೆಲೆಯಲ್ಲಿ ಜನಪದ ಸಾಹಿತ್ಯದ ಸ್ವರೂಪ ಹಾಗೂ ಹೆಣ್ಣುಮಕ್ಕಳ ಹಾಡುವ ವೈವಿಧ್ಯವನ್ನು ಕುರಿತು ಈ ಮೇಲಿನ ಅಂಶಗಳಿಂದ ತಿಳಿಯಬಹುದಾಗಿದೆ.

'' ಈ ಕೃತಿಯು ಕೇವಲ ವಯಸ್ಕರ ಶಿಕ್ಷಣ ಸಂಸ್ಥೆಯಲ್ಲಿ ಓದನ್ನು ಕಲಿತ ಓದುಗರಿಗೆ ಮಾತ್ರವಲ್ಲದೆ ಯಾವೊಬ್ಬ ಓದುಗನಿಗೂ ಪ್ರಿಯವಾಗುವ ಸಂಕಲನವಾಗಿದೆ" ಎಂದು ಜನಪದ ವಿದ್ವಾಂಸರಾದ ಡಾ. ಪಿ.ಕೆ. ರಾಜಶೇಖರ್‌ರವರು ಈ ಮಾತನ್ನು ಹೇಳುತ್ತಾರೆ . ಅದೇ ರೀತಿ ಈ ಕೃತಿಯಲ್ಲಿ ಕಂಡುಬರುವ ಕೆಲವು ತ್ರಿಪದಿಗಳನ್ನು ಈ ಕೆಳಕಂಡಂತೆ ನೋಡಬಹುದಾಗಿದೆ.

ಒಂದು ಹೆಣ್ಣು ಮಗುವಿಗೆ ತನ್ನ ಮಗುವಿನ ಮೇಲೆ ಪ್ರೀತಿ ಇದೆ ಎಂದು ತೋರಿಸುವ ಒಂದು ಮುಖ್ಯವಾದ ಪದ್ಯ -

ಉದಾ : ಅಳುವ ಕಂದನ ತುಟಿಯ ಹವಳದ ಕುಡಿಯಂತೆ
ಕುಡಿಹುಬ್ಬು ಬೇವಿನೆಸಳಂತೆ - ಕಣ್ನೋಟ
ಶಿವನ ಕೈಯಲಗು ಹೊಳೆದಂತೆ

ಒಂದು ಬಂಜೆಯಾದ ಹೆಣ್ಣಿನ ಬದುಕಿನ ಘೋರತೆಯನ್ನು ಸೂಚಿಸುವ ಪದ್ಯ -

ಉದಾ : ಬಾಲಕರಿಲ್ಲದ ಬಾಲೀದ್ಯಾತರ ಜನ್ಮ
ಬಾಡಿಗೆ ಎತ್ತು ದುಡಿದ್ಹಂಗೆ - ಬಾಳೆಲೆಯ
ಹಾಸ್ಯುಂಡು ಬೀಸಿ ಒಗೆದ್ಹಂಗೆ

ಒಂದು ಹೆಣ್ಣಿಗೆ ತನ್ನ ತವರಿನ ಮೇಲೆ ಇರುವ ಪ್ರೀತಿ ವಿಶ್ವಾಸವನ್ನು ಚಿತ್ರಿಸುವ ಪದ್ಯ -

ಉದಾ : ತೊಟ್ಟಿಲ ಹೊತ್ಕೊಂಡು ತೌರ್ಬಣ್ಣ ಉಟ್ಕೊಂಡು
ಅಪ್ಪಕೊಟ್ಟೆಮ್ಮೆ ಹೊಡಕೊಂಡು - ತಂಗ್ಯಮ್ಮ
ತಿಟ್ಹತ್ತಿ ತಿರುಗಿ ನೋಡ್ಯಾಳು

ಈ ರೀತಿಯಾಗಿ ಹೆಣ್ಣುಮಕ್ಕಳ ಪದಗಳು ಸಹಜ ಸೌಂದರ್ಯದ ರೀತಿಯಲ್ಲಿ ಮೂಡಿಬಂದಿರುವ ತ್ರಿಪದಿಗಳ ಸಂಗ್ರಹವಾಗಿದೆ.

## ೨. ಕೆರೆಗೆ ಹಾರ

ಕೆರೆಗೆ ಹಾರ ಕೃತಿಯನ್ನು ತೀ.ನಂ.ಶ್ರೀಯವರು ಜನಪದ ಸಾಹಿತ್ಯದ ಬಗ್ಗೆ ಅನುಕಂಪ ಹೊಂದಿ ಬರೆದ ವಿಮರ್ಶೆ ಉತ್ತಮ ಸಾಕ್ಷಿಯಾಗಿದೆ. ತೀ.ನಂ.ಶ್ರೀಯವರಿಗೆ ಜನಪದ ಸಾಹಿತ್ಯದ ಬಗ್ಗೆ ಗೌರವ ಹಾಗೂ ವಿಶ್ವಾಸ ಇದ್ದಿತೆಂಬುದಕ್ಕೆ 'ಕೆರೆಗೆ ಹಾರ' ಎಂಬ ಉತ್ತರ ಕರ್ನಾಟಕದ ಕೋಲಾಟದ ಪದದ ಬಗ್ಗೆ ಅವರು ಬರೆದ ವಿಮರ್ಶೆ ಉತ್ತಮ ಸಾಕ್ಷಿಯಾಗಿದೆ.

''ಈ ಕಥನ ಗೀತೆ ತೀ.ನಂ.ಶ್ರೀಯವರಿಗೆ ಅತ್ಯಂತ ಪ್ರಿಯವಾಗಿದ್ದ ಹಾಡಾಗಿತ್ತು. ಇದನ್ನು ಕುರಿತು ತೀ.ನಂ.ಶ್ರೀಯವರು ಅನೇಕ ಸಮಾರಂಭಗಳಲ್ಲಿ ಭಾಷಣ ಮಾಡುತ್ತಿದ್ದರಂತೆ''[೬] ಇದರಿಂದಾಗಿ ತೀ.ನಂ.ಶ್ರೀಯವರಿಗೆ ಜನಪದ ಸಾಹಿತ್ಯದ ಬಗ್ಗೆ ಅಪಾರ ಆಸಕ್ತಿ ಇರುವುದಾಗಿ ಕಂಡುಬರುತ್ತದೆ.

ಒಂದಾನೊಂದು ಕಾಲದಲ್ಲಿ ಹಳ್ಳಿಯವರ ಹಾಡುಗಳನ್ನು ಕುರಿತು ಸುಶಿಕ್ಷಿತರಲ್ಲಿ ಮೊದಲಿಗೆ ಅನಾದರವೂ, ತಿರಸ್ಕಾರವೂ ಇದ್ದವು. ಅಕ್ಷರ ಕಲಿಯದವರು, ಅನಾಗರೀಕರು. ತಮ್ಮ ಮನೆಯ ಕಷ್ಟ ಹಾಗೂ ನೋವನ್ನು ಸುಖಗಳನ್ನು ಹಂಚಿಕೊಳ್ಳುವಾಗ ಆಗಾಗ ಹಾಡಿಕೊಂಡ ಹಾಡುಗಳಲ್ಲಿ ಏನು ತಿಳಿದಿರಬಹುದು ಎಂದು ವಿದ್ವಾಂಸರು ಅಸಡ್ಡೆ ಮಾಡುತ್ತಿದ್ದ ಕಾಲವೊಂದಿತ್ತು. ಆದರೆ ಆ ರೀತಿಯಾದ ಅಸಡ್ಡೆ ಇಂದು ಕಡಿಮೆಯಾಗಿ ಜನಪದ ಹಾಡುಗಳಿಗೆ ಉನ್ನತ ಅವಕಾಶ ಮತ್ತು ಪ್ರೋತ್ಸಾಹ ಸಿಕ್ಕಿರುವುದನ್ನು ನಾವು ಕಾಣಬಹುದಾಗಿದೆ.

ಇದರ ಬಗ್ಗೆ ಒಳ್ಳೆಯ ಅಭಿಪ್ರಾಯಗಳು ಈ ಆಧುನಿಕ ಕಾಲದಲ್ಲಿ ಮೂಡಿಬರುತ್ತದೆ. ''ಇದು ಒಳ್ಳೆಯ ಕಾವ್ಯ. ಉತ್ತಮ ಕಾವ್ಯ ಎಂದು ಪ್ರಶಂಸೆಗೆ ಒಳಗಾಗುತ್ತಿದೆ. 'ಕೆರೆಗೆ ಹಾರ' ಎನ್ನುವುದು ಮೂಲತಃ ಉತ್ತರ ಕರ್ನಾಟಕದಲ್ಲಿ ಕೋಲಾಟದ ಪದವಾಗಿ ಇದನ್ನು ಉಪಯೋಗಿಸುತ್ತಿದ್ದರು. ಈ ಹಾಡನ್ನು ಹುಡುಗರು ದೊಡ್ಡವರು, ಹೆಂಗಸರು ಮತ್ತು ಗಂಡಸರು, ಸಾಮಾನ್ಯರು, ವಿದ್ವಾಂಸರು ಎಲ್ಲರ ಮೇಲೂ ಇದು ಉಂಟು ಮಾಡುವ ಪರಿಣಾಮ ಬಹಳ ಅದ್ಭುತವಾದುದು.

ಈ ಕಥನ ಕವನದ ಎಲ್ಲ ಘಟನೆಗಳು ತೀ.ನಂ.ಶ್ರೀಯವರು ಪದ್ಯದ ಸಾಲುಗಳ ಸಮೇತ ಅತ್ಯಂತ ಸಮರ್ಥ ರೀತಿಯಲ್ಲಿ ರಸಧ್ವನಿ ತತ್ವಗಳ ಹಿನ್ನೆಲೆಯಲ್ಲಿ ವಿವರಿಸಿದ್ದಾರೆ. ಏಕೆಂದರೆ ಈ ಹಾಡಿನ ದಾಟಿ ಹಾಗೂ ಕೋಪ ಇತ್ಯಾದಿಗಳು ಈ ಹಾಡಿನಲ್ಲಿ ಮೈದುಂಬಿದೆ. ಒಂದು ಹೆಣ್ಣುಮಕ್ಕಳ ಯಾತನೆ ಅಥವಾ ನೋವನ್ನು ಈ ಭಾಗದಲ್ಲಿ ಕಾಣಬಹುದಾಗಿದೆ.

ಈ ಹಾಡಿನ ಮುಖ್ಯ ಪರಿಚಯ ಈ ಕೆಳಕಂಡಂತೆ ಇದೆ. ಈ 'ಕೆರೆಗೆ ಹಾರ' ಕೃತಿಯು ಮೇಲ್ನೋಟಕ್ಕೆ ಸಂತೋಷವಾಗಿದ್ದರೂ ಆದರ ಒಳ ಪ್ರವೇಶಿಸಿದಾಗ ಒಂದು ಹೆಣ್ಣುಮಗಳ ದುರಂತ ಕತೆಯನ್ನು ಹೇಳುತ್ತದೆ. ಒಂದು ಊರಿನ ಹಿತಕ್ಕಾಗಿ ಆ ಊರಿನ ಗೌಡ ತನ್ನ ಸೊಸೆಯನ್ನು ಕೆರೆಗೆ ಆಹುತಿ ಕೊಡುವುದನ್ನು ಈ ಕಥಾನಕ ವಿವರಿಸುತ್ತದೆ.

" ಉದಾ: ಕಲ್ಲನಕೇರಿ ಮಲ್ಲನಗೌಡ ಕೆರೆಯೊಂದು ಕಟ್ಸಿಸ್ಯಾನು
ಕೆರೆಯೊಂದು ಕಟ್ಸಿಸ್ಯಾನು ಸೆರೆಮುಕ್ಕ ನೀರಿಲ್ಲ
ಸೆರೆಮುಕ್ಕ ನೀರಿಲ್ಲ ಹೊತ್ತಿಗೆ ತಗಸ್ಯಾರು
ಹೊತ್ತಿಗೆ ತಗಸ್ಯಾರು ಜೋಯಿಸಿ ಕೇಳಿದರು"[2]

ಈ ಮೇಲಿನ ಪದ್ಯದಲ್ಲಿ ಜನಪದರಿಗೆ 'ನಂಬಿಕೆ' ಎನ್ನುವುದು ಅವರ ಜೀವನದಲ್ಲಿ ಪ್ರಧಾನ ಪಾತ್ರವಹಿಸುತ್ತವೆ. ಗೌಡನು ಊರಜನರ ಉಪಯೋಗಕ್ಕಾಗಿ ಅವನು ಮಾಡುವ ಸೇವೆ ನಿಸ್ವಾರ್ಥವಾದುದು. ಆದರೆ ಅದನ್ನು ತಿಳಿದುಕೊಳ್ಳಲು ಜೋಯಿಸರ ಮೊರೆ ಹೋಗುವುದು, ಶಾಸ್ತ್ರ ಕೇಳುವುದು, ಜೋಯಿಸರ ಮಾತನ್ನು ನಂಬುವುದು, ಇವೆಲ್ಲ ಹಳ್ಳಿಯ ಮುಗ್ದರ ನಂಬಿಕೆಗೆ ಸಂಬಂಧಪಟ್ಟಿದೆ. ಹಳ್ಳಿಯ ಜನ ಅವಿದ್ಯಾವಂತರಾದರೂ ಊರಿನ ಹಿತಕ್ಕಾಗಿ ಶ್ರಮಿಸುವ ಜನರು ಇರುತ್ತಾರೆ ಎಂಬುದು ಈ ಜನಪದ ಕಥಾನಕದ ಮೂಲಕ ನಮಗೆ ತಿಳಿದು ಬರುತ್ತದೆ. ಗೌಡನು ಊರಿನಲ್ಲಿ ಅಥವಾ ಊರಿನ ಜನರ ಹಿತಕ್ಕಾಗಿ ಊರಿನಲ್ಲಿ ಕೆರೆಯನ್ನು ಕಟ್ಟಿಸಿದರೆ ಆ ಕೆರೆಯಲ್ಲಿ ನೀರು ಬಾರದೆ ಇರುವುದು ದುರದೃಷ್ಟಕರ ಸಂಗತಿಯಾಗಿದೆ. ಇದರ ನಿವಾರಣೋಪಾಯವನ್ನು ತಿಳಿಯದ ಜೋಯಿಸನನ್ನು ಶಾಸ್ತ್ರ ಕೇಳುವುದು, ಆ ಶಾಸ್ತ್ರಕ್ಕೆ ಅನುಗುಣವಾಗಿ ನಡೆಯುವುದು ಹಳ್ಳಿಯ ಜನರ ಮುಕ್ತ ಮನಸ್ಸಿಗೆ ಸಾಕ್ಷಿಯಾಗಿದೆ.

ಇದಕ್ಕೆ ಕಾರಣ ಜೋಯಿಸನು ಕೊಡುವುದು ಗ್ರಹಶಾಂತಿಯನ್ನು ಅಥವಾ ಬಲಿಯನ್ನು ಕೊಡಬೇಕು ಎಂದು ತಿಳಿಸುತ್ತಾರೆ. ಅದು ಯಾವ ರೀತಿ ಬಲಿ ಎಂದು ಗೌಡನು ಜೋಯಿಸನನ್ನು ಪ್ರಶ್ನಿಸಿದರೆ ಜೋಯಿಸರು ಗೌಡರ ಮಾತಿಗೆ ಅನುಗುಣವಾಗಿ ಈ ರೀತಿ ನುಡಿಯುವುದು, ತುಂಬಿದ ಪ್ರಾಣವನ್ನು ಬಲಿ (ನರಬಲಿ) ಕೊಡಬೇಕಾಗಿ ಹೇಳುವುದು, ಅದಕ್ಕೆ ಗೌಡನು ತನ್ನ ಸೊಸೆಯಾದ ಭಾಗೀರಥಿಯನ್ನು ಕೆರೆಗೆ ಬಲಿಯಾಗಿ ಕೊಡುವುದು ಇದು ಜಾನಪದ ಕಥನ ಶೈಲಿಯಾಗಿದೆ. ಇದು ಒಂದು ದುರಂತ ಕಥೆಯಾಗಿದೆ.

ಕೆರೆಗೆ ಹಾರದ ಇಡಿ ಕಥೆಯೇ ದುರಂತವೇ ಒಂದು ಮೂಢನಂಬಿಕೆಯ ಮೇಲೆ ನಿಂತಿದೆ ಎಂದು ಗಿರಿಡ್ಡಿಯವರು ಹೇಳುತ್ತಾರೆ. 'ಕೆರೆಗೆ ಹಾರ' ದುರಂತದ ಪ್ರಜ್ಞೆಯನ್ನು

ಕುರಿತು 'ಇಷ್ಟೆಲ್ಲಾ ದುರಂತ ಪ್ರಜ್ಞೆಯಿದ್ದು ಕವಿ ಇಡಿಯ ಕಥೆಯನ್ನು ಹೇಳಿರುವ ರೀತಿಯಲ್ಲಿರುವ ನಿರ್ಲಿಪ್ತತೆ ಆಶ್ಚರ್ಯವಾಗಿದೆ. ಈ ನಿರ್ಲಿಪ್ತತೆಯು ಕವಿತೆಯ ಗುಣವೂ ಹೌದು ದೋಷವೂ ಹೌದು'' ಎಂದು ಬಹುಮುಖ್ಯ ಅಂಶವನ್ನು ಗುರುತಿಸಿದ್ದಾರೆ.

ಮೂಲತಃ ಹಳ್ಳಿಯ ಜನ ಅವಿದ್ಯಾವಂತರಾಗಿದ್ದು, ಅಲಿಖಿತ ಪರಂಪರೆಗೆ ಸೇರಿದವರಾಗಿದ್ದಾರೆ. ಇಂಥವರು ಮೂಢನಂಬಿಕೆಯ ಮೇಲೆ ತಮ್ಮ ಜೀವನವನ್ನು ರೂಪಿಸಿಕೊಂಡಿರುತ್ತಾರೆ ಎಂದು ಹೇಳಬಹುದಾಗಿದೆ. ಇಲ್ಲಿ ಕಂಡುಬರುವ ರಸ ಶೋಕರಸವಾಗಿದ್ದು ಒಬ್ಬ ಹೆಣ್ಣುಮಗಳ ದುರಂತ ಕತೆಯನ್ನು ಪ್ರತಿಪಾದಿಸುತ್ತದೆ. ಜೋಯಿಸರು ಗೌಡರಿಗೆ ಹೇಳಿದ್ದು ಮನೆಯ ಹಿರಿಯ ಸೊಸೆ ಮಲ್ಲವ್ವನ ಕೆರೆಗೆ ಹಾರ ಕೊಡಬೇಕೆಂದು, ಆದರೆ ಮನೆಯ ಹಿರಿಯ ಸೊಸೆಯನ್ನು ಹಾರವಾಗಿ ಕೊಟ್ಟರೆ ಹೇಗೆ ಮನೆತನದ ಹಿರಿಮೆ ಸಂತತಿ ಮುಂದುವರಿಯಬೇಡವೆ, ಬಲಿಯನ್ನಂತು ಕೊಡಲೇಬೇಕು. ಇಲ್ಲವಾದರೆ ಕೈಹಿಡಿದ ಧರ್ಮಕಾರ್ಯ ಕೆಟ್ಟುಹೋಗುತ್ತದೆ ಎಂದು ಗೌಡರ ಆತಂಕ. ಹಾಗಾದರೆ ಕಿರಿಯ ಸೊಸೆಯಾದ ಭಾಗೀರಥಿಯನ್ನೇ 'ಕೆರೆಗೆ' ಹಾರ ಕೊಡಬೇಕು ಎಂದು ಗೌಡರು ನಿಶ್ಚಯಿಸಿರುವುದು ಬಹಳ ದುರಂತ ಪ್ರಜ್ಞೆಯಾಗಿದೆ.

ಒಂದು ಹೆಣ್ಣುಮಗಳ ಜೀವನವನ್ನೇ ಆಹುತಿ ತೆಗೆದುಕೊಂಡಂತೆ ಹಾಗಿದೆ. ಏಕೆಂದರೆ ತುಂಬಿದ ಜೀವ ಭಾಗೀರಥಿ ಈ ಮಾತನ್ನು ಕೇಳಿದ ಭಾಗೀರಥಿ ಮುಖ ತಪ್ತಳಾಗುವುದು. ಮುಂದಿನ ಅನುಪಾತದಲ್ಲಿ ಬರುತ್ತದೆ. ಕೆರೆಗೆ ಹಾರದ ಬಗ್ಗೆ ಗಿರಡ್ಡಿಯವರು ಕೊಟ್ಟ ಅಭಿಪ್ರಾಯ, ಸಿ.ಪಿ.ಕೆ. ಯವರು ಒಪ್ಪುವುದಿಲ್ಲ. ಅದಕ್ಕೆ ಬದಲಾಗಿ ಇದಕ್ಕೆ ಸೂಕ್ತ ಕಾರಣಗಳನ್ನು ಕೊಡುತ್ತಾರೆ.. ಅದೇನೆಂದರೆ ವೈಯಕ್ತಿಕ ಪ್ರಜ್ಞೆ ಇಲ್ಲದೆ ನಾಗರೀಕ ಕಾವ್ಯ ದೋಷವಾಗಿರಬಾರದು ಎಂಬ ಸಿ.ಪಿ.ಕೆ. ಯವರ ಪ್ರಶ್ನೆ ಗಂಭೀರವಾಗಿ ಚಿಂತನೆಗೆ ಒಳಪಡಿಸಿದೆ.

ಅಂದರೆ ಗಿರಡ್ಡಿಯವರ ಹೇಳಿಕೆಗೆ ವಿರುದ್ಧವಾಗಿ ಸಿ.ಪಿ.ಕೆಯವರು ಉತ್ತರ ಕೊಡುತ್ತಾರೆ. "ಅದೇನೆಂದರೆ ಜನಪದರೂ ಮೂಲತಃ ಅವಿದ್ಯಾವಂತರು ಅಜ್ಞಾನಿಗಳೂ ಆದರೆ ಅವರಿಗೂ ಯೋಚನೆ ಮಾಡುವ ಶಕ್ತಿ ಇದೆ ಎಂದು ಸಿ.ಪಿ.ಕೆ. ತಿಳಿಸುತ್ತಾರೆ.''[೮] ಈ ಕೆರೆಗೆ ಹಾರ ಲೇಖನವೂ ತುಂಬ ಸ್ವಾರಸ್ಯಕರವಾದ ಹಾಗೂ ವಿಚಾರಪೂರ್ಣವಾದ ಲೇಖನವಾಗಿದೆ ಎಂದು ಹೇಳಬಹುದು. ಎಂತಹವರಿಗೂ ಈ ಲೇಖನಗಳನ್ನು ಓದಿದ ಮೇಲೆ ಮನಸ್ಸಿನಲ್ಲಿ ಆತಂಕ ಅಥವಾ ದುಃಖ ಉಂಟಾಗುವುದು ಸಹಜವಾದುದು. ಸಿ.ಪಿ.ಕೆ. ಅವರ ಮಾತು ಈ ರೀತಿ ಇದೇ ಅಂದರೆ ಜನಪದ ಮೂಲತಃ ಅಲಿಖಿತ ಪರಂಪರೆಗೆ

ಸೇರಿದವರಾಗಿದ್ದರು. ಅವರ ಜ್ಞಾನ ಬಹಳ ಅದ್ಭುತವಾದುದು. ಅವರು ಕಟ್ಟುವ ಕಾವ್ಯ ರೋಮಾಂಚಕಾರಿಯಾದದ್ದು ಎಂದು ಹೇಳಬಹುದಾಗಿದೆ.

ಆದಕ್ಕೆ ತೀ.ನಂ.ಶ್ರೀಯವರಿಗೆ ಈ ಕಥನ ಕಾವ್ಯ ತುಂಬಾ ಇಷ್ಟವಾದುದು. ಇದರಲ್ಲಿ ಕಂಡುಬರುವ ದುರಂತ ಪ್ರಜ್ಞೆಯನ್ನು ಕುರಿತು ಆಲೋಚಿಸಿದ್ದು ಹಾಗೂ ಕಥಾನಕದ ರೀತಿಯನ್ನು ಪರಿಶೀಲಿಸಿರುವುದಾಗಿ ಕಂಡುಬರುತ್ತದೆ. ಇದರಲ್ಲಿ ಗೌಡನು ಭಾಗೀರತಿಯನ್ನು 'ಕೆರೆಗೆ ಹಾರ' ಕೊಡಲೇಬೇಕೆಂಬ ತೀರ್ಮಾನ ಈ ಕೆಳಕಂಡ ಪದ್ಯದ ಮೂಲಕ ನೋಡಬುದಾಗಿದೆ. ಈ ಸನ್ನಿವೇಶ ಹಳ್ಳಿಯ ಮುಗ್ಧ ವಾತಾವರಣವನ್ನು ಕುರಿತು ಹೇಳುವುದಾಗಿದೆ.

ಕೆರೆಗೆ ಹಾರ ಕೊಡಲೇಬೇಕೆಂಬ ಸಂದರ್ಭ

ಉದಾ : ಕಡೆಸೊಸೆ ಭಾಗೀರಥಿನ್ನ ಹಾರವ ಕೊಡಬೇಕು
ಹಾರ ಕೊಡಬೇಕಂತ ಮಾತಾಡು ಮನೆಯಾಗ
ಅಂತೂ ಹೀಗೆ ನಿಷ್ಕರ್ಷೆಯಾಯಿತು ಬಳಿಕ?
ಸಣ್ಣಸೊಸೆ ಭಾಗೀರಥಿ ತವರು ಮನೆಗೆ ಹೋದಳು
ಅತ್ತೆವ್ವ ನಾ ನಮ್ಮ ತವರು ಮನೆಗೆ ಹೋಗುತ್ತೀನಿ
ಸರ್ರನೆ ಹೋಗವ್ವ ಭರ್ರನೆ ಬಾರವ್ವಾ (ಕೆರೆಗೆ ಹಾರ, ತೀ.ನಂ.ಶ್ರೀ)

ಈ ಮೇಲಿನ ಪದ್ಯದ ಪ್ರಕಾರ ಮನೆಯಲ್ಲಿ ಆದ ಮಾತುಕತೆ ಕೊನೆಯ ಸೊಸೆ ಭಾಗೀರಥಿಯ ಹೇಗೆ ಬೀಳುದಿರುತ್ತದೆಯೇ ಅವಳ ಸಂಗಡ ಹಿರಿಯರು ನೇರವಾಗಿ ಪ್ರಸ್ತಾಪಿಸಿಲಾರಳು. ಇವಳೂ ಎದುರಿಗೆ ನಿಂತು ಪ್ರಶ್ನಿಸಲಾರಳು. ಹಾಗೆ ಮಾಡುವುದು ಹಿರಿಯ ಸಂಪ್ರದಾಯಕ್ಕೆ ವಿರೋಧಿ ಆದರೆ ತಾನು ಜೀವ ಒಪ್ಪಿಸಿಕೊಳ್ಳಬೇಕಾದ ಸಂದರ್ಭ ಬಂದಾಗ ಈ ಎಳೆಯಳ ಮನಸ್ಸಿನಲ್ಲಿ ಕಳವಳ ಹುಟ್ಟಿ ತವರುಮನೆಗೆ ಹೋಗಿ ಬರಬೇಕೆಂಬ ಆಸೆ ಹೆಣ್ಣು ಮಕ್ಕಳಿಗೆ ಸಹಜವಾಗಿ ಇರುವಂತಹುದು. ತವರು ಮನೆಗೆ ಭಾಗೀರಥಿ ಬಂದಾಗ ಮೊದಲು ಎದಿರುಗೊಳ್ಳುವುದು ಅವರ ಅಪ್ಪ

ಉದಾ : ಸಣ್ಣ ಸೊಸೆ ಭಾಗೀರಥಿ ತವರು ಮನೆಗೆ ಹೋದಾಳು
ಮನೆಮುಂದೆ ಹೋಗುವಕ ಅವರಪ್ಪ ಬಂದಾನು
ಎಂದಿಲ್ಲದೆ ಭಾಗೀರಥಿ ಇಂದ್ಯಾಕ ಬಂದವ್ವ
ಬಾಡಿದ ಮಾರ್‍ಯಾಕ ಕಣ್ಣಾಗ ನೀರ್‍ಯಾಕ ?

ಭಾಗೀರಥಿ ವಿಷಯವನ್ನು ನೇರವಾಗಿ ಬಿಡಿಸಿ ಹೇಳಲು ಬಾಯಿ ಬರಲಿಲ್ಲ. ಇದಕ್ಕೆ ಅನುಗುಣವಾಗಿ ನಮ್ಮ ಮಾವ ಅತ್ತೆ ನನ್ನ ಬೇರೆ ಇಡುತ್ತಾರಂತೆ ಎಂದು ಉತ್ತರ ಕೊಟ್ಟಳು. ಅದಕ್ಕೆ ತಂದೆ ಹೇಳುವುದು ಬಿಟ್ಟರೆ ಇಡಲಿ ನಾನು ಸಹಾಯ ಮಾಡುತ್ತೇನೆ ಎಂದು ತಂದೆ ಹೇಳುವುದು ಮಗಳ ಮಾತಿಗೆ ಸಾಂತ್ವನ ನೀಡುವುದು

ಈ ಮಾತಿನ ಪ್ರಕಾರ ತಂದೆಯ ಆಶೀರ್ವಾದ ಪಡೆದು ತನ್ನ ತಾಯಿಯ ಹತ್ತಿರ ಹೋಗುವುದು ತನ್ನ ಕಷ್ಟವನ್ನು ಹೇಳಿಕೊಳ್ಳುವುದು. ಭಾಗೀರಥಿ ಇದ್ದ ವಿಷಯವನ್ನು ಹೇಳದೆ ಬೇರೆಯ ವಿಚಾರವನ್ನು ಸುತ್ತಿ ಬಳಸಿ ಹೇಳುತ್ತಿರುವುದು ಕಂಡುಬರುತ್ತದೆ. ತವರು ಮನೆಯಲ್ಲಿ ಭಾಗೀರಥಿಗೆ ಸಮಾಧಾನ ದೊರೆಯಲಿಲ್ಲ. ಅವಳ ಸಮಸ್ಯೆ ಬಗೆಹರಿಯಲಿಲ್ಲ. ಇದಕ್ಕೆ ಬದಲಾಗಿ ಗೆಳತಿ ಮನೆಗೆ ಹೋಗಿ ತನ್ನ ಕಷ್ಟವನ್ನು ಹೇಳಿಕೊಳ್ಳುವುದನ್ನು ಒಂದು ಪದ್ಯದಿಂದ ತಿಳಿದುಕೊಳ್ಳಬಹುದಾಗಿದೆ.

ಉದಾ: '' ಸಣ್ಣಸೊಸೆ ಭಾಗೀರಥಿ ತವರು ಮನೆ ಬಿಟ್ಟು
ತವರು ಮನೆಯ ಬಿಟ್ಟು ಗೆಣತಿ ಮನೆಗೆ ನಡೆದಳು
ತಲಬಾಗಲದಾಗ ಗೆಳತಿನ್ನ ಕಂಡಳು.''[೯]

ಗೆಳತಿಯಾದವಳು ಭಾಗೀರಥಿಯನ್ನು ಕೇಳುವುದು ಎಂದಿಲ್ಲದೆ ಭಾಗೀರಥಿ ಇಂದ್ಯಾಕ ಅಳುವು ಎಂದು ಗೆಳತಿಯು ಭಾಗೀರಥಿಯನ್ನು ಕೇಳುವಾಗ ಭಾಗೀರಥಿ ತನ್ನ ಹೃದಯವನ್ನು ಮೊದಲ ಬಾರಿ ಗೆಳತಿ ಹತ್ತಿರ ತೆಗೆದು ನೇರವಾದ ಮಾತಿನಲ್ಲಿ '' ನಮ್ಮತ್ತೆ ಮಾವ ನನ್ನನ್ನು ಕೆರೆಗೆ ಹಾರ ಕೊಡತಾರಂತ! ಎಂದು ಇದ್ದ ವಿಷಯವನ್ನು ಇದ್ದ ಹಾಗೆ ಹೊರಗಡೆಯುತ್ತಾಳೆ. ಇವಳ ನಂಬಿಕೆ ಶ್ರದ್ಧೆಗೆ ಗೆಳತಿ ಎಷ್ಟೊಂದು ಅರ್ಹಳು ! ಕೊಟ್ಟರೆ ಕೊಡಲೇಳು ಇಟ್ಟಾಂಗ ಇರಬೇಕ ಎಂಬುದೇ ಅವಳ ನಿರ್ಧಾರವಾದ.

ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಭಾಗೀರಥಿಯು ತನ್ನ ಅತ್ತೆ ಮಾವನಿಗೆ ಮರ್ಯಾದೆ ಕೊಟ್ಟು ಹಾಗೂ ಊರಿನ ಹಿತವನ್ನು ರಕ್ಷಿಸಲು ಮುಂದುವರಿಯುತ್ತಿರುವುದನ್ನು ಕಾಣಬಹುದಾಗಿದೆ. ಕೊನೆಯಲ್ಲಿ ಭಾಗೀರಥಿ ಬಲಿದಾನಕ್ಕೆ ಎದೆಯನ್ನು ಗಟ್ಟಿಮಾಡಿಕೊಂಡು ಈ ಸಣ್ಣ ಸೊಸೆ ಅತ್ತೆಯ ಮನೆಗೆ ಹಿಂದುರಿಗಿದಳು. ತದನಂತರ ಕೆರೆಗೆ ಹಾರವಾಗಿ ಭಾಗೀರಥಿ ಪರಿಣಮಿಸುವುದು. ಈ ಸನ್ನಿವೇಶದಲ್ಲಿದ್ದುದು ಹೆಣ್ಣುಮಗಳ ದುರಂತ ಪ್ರಜ್ಞೆಯನ್ನು ಕುರಿತು ಅರ್ಥೈಯಿಸಬಹುದಾಗಿದೆ. ಒಂದು ಹಳ್ಳಿಯ ಸ್ತಬ್ದ ವಾತಾವರಣವನ್ನು ಕುರಿತು ಇಲ್ಲಿ ಹೇಳಬಹುದಾಗಿದೆ. ಇದೊಂದು ಉತ್ತಮ ಲೇಖನವಾಗಿದೆ.

## ೩. ಎನಿತ್ತೆನಿತ್ತಂಬುಜ ಪತ್ರನೇತ್ರೆಯಾ......(ಶಾಸನಪದ್ಯ)
### (ಶಾಸನ ಪದ್ಯದ ಬಿಡಿಲೇಖನ)

ತೀ.ನಂ.ಶ್ರೀಯವರ ಪ್ರಕಾರ ಇದು ಶಬ್ದಮಣಿ ದರ್ಪಣದಲ್ಲಿ ಕೇಶಿರಾಜನು ಸ್ವಾರಸ್ಯವುಳ್ಳ ಹಲವು ಪದ್ಯಗಳನ್ನು ಹಾಗೂ ಅದರ ತುಣುಕುಗಳನ್ನು ಉದಾಹರಿಸುವುದಷ್ಟೇ ೧೧೮ನೇಯ ಸೂತ್ರದ ಕೆಳಗೆ ಬಂದಿರುವ ಈ ಪದ್ಯವು ತೀ.ನಂ.ಶ್ರೀಯವರ ಗಮನ ಸೆಳೆಯುತ್ತದೆ. ಈ ಪದ್ಯವು ಈ ಕೆಳಕಂಡ ರೀತಿಯಲ್ಲಿ ಇದೆ.

ಎನಿತ್ತನಿತ್ತಂಬುಜ ಪತ್ರನೇತ್ರೆಯಾ।<br>
ಘನಸ್ತನಂಗಳ್ ಬಳಿಗುಂ ಕಿರಾತೆಯಾ॥<br>
ಅನಿತ್ತನಿತ್ತಂ ವನದೊಳ್ ವನೇಚರಂ।<br>
ತನತ್ತ ಬಿಲ್ಲಾನಹನಂತೆ ಕೀಸುವಂ॥

ಈ ಪದ್ಯವು ಯಾವ ಗ್ರಂಥದಲ್ಲಿ ಕಂಡುಬರುತ್ತದೆ ಎಂಬ ಚರ್ಚೆಗಳು ವಿದ್ವಾಂಸರನು ಆಧಾರವಾಗಿ ಹೊಂದಿದೆ. ಈ ಪದ್ಯದ ಉಲ್ಲೇಖಗಳು ಕಂಡುಬರುವ ಕೆಲವು ಗ್ರಂಥಗಳ ಹೆಸರು ಈ ಕೆಳಕಂಡಂತೆ ಇದೆ. ಈ ಪದ್ಯವನ್ನೊಳಗೊಂಡ ಕಾವ್ಯವು ಈಗ ದೊರೆಯುವುದಿಲ್ಲವೆಂಬುದು ವಿದ್ವಾಂಸರ ನಿರ್ಣಯವಾಗಿದೆ. ಇದಕ್ಕೆ ತಕ್ಕಂತೆ ಈ ಪದ್ಯ ಮೊದಲು ಕಾಣಿಸಿಕೊಳ್ಳುವುದು '' ಎರಡನೆಯ ನಾಗವರ್ಮನ (ಕಾಲ ಕ್ರಿ.ಶ. ಸುಮಾರು ೧೧೪೫) ಕಾವ್ಯಾವಲೋಕನದಲ್ಲಿ ಅನಿತು, ಇಂತು ಎಂಬ ಪರ್ಯಾವಾಚಕಗಳಿಗೆ ಅನಿತ್ತು, ಇನಿತ್ತು, ಎನಿತ್ತು ಎಂಬ ದ್ವಿತ್ವ ಸಹಿತವಾದ ಪ್ರಯೋಗವೂ ಉಂಟೆಂದು ತೋರಿಸಲು ಈ ಪದ್ಯವನ್ನು ಎರಡನೇ ನಾಗವರ್ಮ ಉದಾಹರಿಸುತ್ತಾನೆ.''[೧೦] ಅದೇ ರೀತಿ ಎರಡನೇ ನಾಗವರ್ಮನ ಭಾಷಾಭೂಷಣದಲ್ಲಿ ಇದಕ್ಕೆ ಸಂವಾದಿಯಾಗಿರುವ ಸೂಕ್ತ ಬಂದಿರುವುದನ್ನು ವಿದ್ವಾಂಸರು ಗಮನಿಸುತ್ತಾರೆ.

ಅದೇ ರೀತಿಯಾಗಿ ಶ್ರೀ ಕೇಶೀರಾಜನ ಶಬ್ದಮಣಿ ದರ್ಪಣದಲ್ಲಿಯು ಈ ಪದ್ಯದ ಉಲ್ಲೇಖವಿದೆ. ಅದೇ ರೀತಿ ಭಟ್ಟಾಕಳಂಕನ ಶಬ್ದಾನುಶಾಸನದಲ್ಲಿಯೂ ಈ ಪದ್ಯವನ್ನು ಉಲ್ಲೇಖಿಸಿರುವುದು ವಿದ್ಯಾಛಂದನ ಎಂಬ ಕವಿ ತನ್ನ ಕಾವ್ಯಸಾರವೆಂಬ ಪದ್ಯ ಸಂಕಲನದಲ್ಲಿ ಶಬರ ವರ್ಣನೆಯ ಪ್ರಸಂಗದಲ್ಲಿ ಇದನ್ನು ವಿವರಿಸಿದ್ದಾನೆ. ಈ ರೀತಿಯ ಶಾಸನ ಪದ್ಯವು ಅಲ್ಲಲ್ಲಿ ಕಾಣಿಸಿಕೊಳ್ಳುವುದನ್ನು ಕಾಣಬಹುದಾಗಿದೆ. ಇದನ್ನು ಕುರಿತಾಗಿ ತೀ.ನಂ.ಶ್ರೀಯವರು ತಮ್ಮ ಸಮಾಲೋಕನದಲ್ಲಿ ತಿಳಿಸಿದ್ದಾರೆ.

ಅದೇ ರೀತಿ ಎಂ.ವಿ.ಸೀ. ಅವರ ಲೇಖನದಲ್ಲಿ ಈ ಪದ್ಯವು ಮೊದಲು 'ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ'ಯಲ್ಲಿ ಬಂದದ್ದು (೩೧-೨/೧೯೪೬) ಎಂದು ತಿಳಿಸುತ್ತಾರೆ. ೧೯೪೬ರಲ್ಲೇ ಈ ಲೇಖನ ಪ್ರಚಾರವಾಗಿದ್ದರೂ ಅದೇ ಲೇಖನಗಳ ಹಿಂದೆಯೇ ತೀ.ನಂ.ಶ್ರೀಯವರ ಸಂಪಾದನ ಕಾರ್ಯ ಮೊದಲಾಗಿತ್ತೆಂದು ಊಹಿಸುತ್ತಾರೆ. ತೀ.ನಂ.ಶ್ರೀಯವರು ಈ ಪದ್ಯದ ಶೋಧನೆಗೆ ಉಪಯೋಗಿಸಿಕೊಂಡಿರುವ ಆಕರಗಳನ್ನು ಅವುಗಳಿಗೆ ಕೊಟ್ಟಿರುವ ಸಂಕೇತಗಳನ್ನು ಈ ಕೆಳಕಂಡಂತೆ ಗುರುತಿಸಿದ್ದಾರೆ.

| | | |
|---|---|---|
| " ಕಾವ್ಯ -೧- ಕಾವ್ಯಾವಲೋಕನ | : | ಡಾ. ನರಸಿಂಹಾಚಾರ್ಯರು, ಮುದ್ರಣ (ಬೆಂ.ಅ. - ೧೯೦) |
| ಕಾವ್ಯ -೨- ಕಾವ್ಯಾವಲೋಕನ | : | ಎಚ್.ಆರ್.ರಂಗಸ್ವಾಮಿ ಅಯ್ಯಂಗಾರರು (ಓ.ಲೈ. ೧೯೩೯) |
| ಕಾವ್ಯ-೩- ಕಾವ್ಯಾವಲೋಕನ | : | ಶಶಿ ಬಸವನಾಳ ಮತ್ತು ತೇಪು ಶಂಕರನಾರಾಯಣ (೧೯೩೯) |
| ಭಾಷೆ - ೧- ಭಾಷಭೂಷಣ | : | ಲೂಯಿರೈಸ್ ಅವರ ಮುದ್ರಣ, (೧೯೩೯) |
| ಭಾಷೆ-೨- ಭಾಷಭಾಷಣ | : | ೧೮೮೧ನೆಯ ಸೂತ್ರದ ಕೆಳಗೆ |
| ಶಬ್ಧ ೧- ಶಬ್ಧಮಣಿ ದರ್ಪಣ | : | ಎಫ್. ಕಿಟ್ಟೆಲ್ ಮೊದಲನೆಯ (೧೮೭೨) |
| ಶಬ್ಧ ೨- ಶಬ್ಧಮಣಿದರ್ಪಣ | : | ಪಂಜೆ ಮಂಗೇಶರಾಯರು, ಪರಿಷ್ಕರಣ, (ಮಂ) ೧೯೨೦"[೧೧] |

ಈ ಶಾಸನ ಪದ್ಯವು ಕಂಡುಬರುವ ಹಾಗೂ ಅದರ ಬಗ್ಗೆ ಕಂಡುಬರುವ ಕೆಲವು ವಿಚಾರಗಳನ್ನು ತೀ.ನಂ.ಶ್ರೀಯವರು ತಮ್ಮ 'ಸಮಾಲೋಕನ' ಎಂಬ ಕೃತಿಯಲ್ಲಿ ವಿವರಿಸಿದ್ದಾರೆ. ಈ ಪದ್ಯವು ಶೃಂಗಾರಕ್ಕೆ ಸಂಬಂಧಪಟ್ಟದ್ದು ಎಂದು ತೀ.ನಂ.ಶ್ರೀಯವರು ತಿಳಿಸುತ್ತಾರೆ.

ಆದರೆ ಇದರ ಅರ್ಥ ಮೇಲುನೋಟಕ್ಕೆ ಸಿಗುವುದು ಕಷ್ಟವೆಂದು ತೀ.ನಂ.ಶ್ರೀಯವರು ತಿಳಿಸಿದ್ದಾರೆ. ಇದರ ಅರ್ಥ ಅರಣ್ಯವಾಸಿಗಳಾಗಿ ಬಿಲ್ಲಿನ

ಬೇಟೆಯಿಂದ ಜೀವನ ನಡೆಸುವಾಗ ಬೇಡರಿಗೆ ಸಂಬಂಧಿಸಿದ ಒಂದು ಸಂಗತಿಯನ್ನು ಇಲ್ಲಿ ಕವಿ ಚಮತ್ಕಾರವಾಗಿ ಚಿತ್ರಿಸಿದ್ದಾನೆ.

ಈ ಪದ್ಯದಲ್ಲಿ ಚೆಲುವೆಯಾದ ಬೇಡತಿಯು ಯೌವನೆಯಾಗಿದ್ದು ವರ್ತಿಸಿದ ಹಾಗೆಲ್ಲಾ ಅವಳಲ್ಲಿ ಬೇಡನು ಅತ್ಯಸಕ್ತನಾಗಿ ದುರ್ಬಲವಾಗುತ್ತಾನೆ ಮೊದಲು ಲೀಲಾಜಾಲವಾಗಿ ಭಾಗಿಸುತ್ತಿದ್ದ ಬಿಲ್ಲು ಈಗ ಅವನ ಅಳವಿಗೆ ಮೀರುತ್ತದೆ. ಬೇಡನು ಬೇಡತಿಯ ಪ್ರೀತಿಗೆ ಪಾತ್ರನಾಗಿರುವ ವಿಷಯ ಈ ಪದ್ಯ ಪ್ರಸ್ತಾಪಿಸುತ್ತದೆ. ಈ ಬಗೆಯ ಪ್ರಾಚೀನ ಸಾಹಿತ್ಯದಲ್ಲಿ ಅರ್ಥಪೂರ್ಣತೆಯೂ ಅಲ್ಲ. ತೀ.ನಂ.ಶ್ರೀಯವರು ಪರಿಶೋಧನೆಗೆ ಸಂಬಂಧಪಟ್ಟಂತೆ ಉಪಯೋಗಿಸಿಕೊಂಡಿರುವ ಆತಂಕಗಳನ್ನು ಈ ಮೇಲಿನ ಗ್ರಂಥಗಳಲ್ಲಿ ಪ್ರಸ್ತಾಪಿಸಿದ್ದಾರೆ.

''ತೀ.ನಂ.ಶ್ರೀಯವರು ಈ ಶಾಸನ ಪದ್ಯಕ್ಕೆ ಅನುಗುಣವಾಗಿ ಕೆಲವು ಪಾಠಾಂತರಗಳನ್ನು ಮಾಡಿದ್ದಾರೆ. ಪದಕ್ಕೆ ಸೇರಿಸುವ ಧಾತುಗಳನ್ನು ಮೂಲಪಾಠಕ್ಕೆ ಸೇರಿದ್ದು ಯಾವುದೆಂದು ನಿರ್ಣಯಿಸುವುದು ಬಹಳ ಮುಖ್ಯವಾದುದು''[೧೨] ಎಂದು ತೀ.ನಂ.ಶ್ರೀಯವರು ಅಭಿಪ್ರಾಯ ಪಡುತ್ತಾರೆ ಬದಲಾಗಿ ಈ ಶಾಸನದಲ್ಲಿ ಕಂಡುಬರುವ ಅನೇಕ ದೋಷಗಳನ್ನು ಕಂಡುಹಿಡಿದು ಅದಕ್ಕೆ ಸರಿಯಾದ ಪದಗಳನ್ನು ಸೂಚಿಸಿ ಅರ್ಥಗರ್ಭಿತವಾಗಿ ಮಾಡುತ್ತಾರೆ.

ಉದಾ : ಈ ಶಾಸನದ ಎರಡನೆಯ ಪದಾದಲ್ಲಿ 'ಬಳಗುಂ' ಎಂಬುದಕ್ಕೆ ತೀ.ನಂ.ಶ್ರೀಯವರು ಕೆಲವು ಗ್ರಂಥಗಳನ್ನು ಪರಿಶೀಲಿಸಿ ಈ ಪದದ ವಿವಿಧ ರೂಪಗಳನ್ನು ಸೂಚಿಸಿದ್ದಾರೆ.

ಭಾಷಾ -೧ : ಭಾಷಾ ಭೂಷಣದಲ್ಲಿ ಲೂಯಿರೈಸನು ಮುದ್ರಣ ಮಾಡಿರುವ ಗ್ರಂಥಗಳಲ್ಲಿ ಈ ಪದಕ್ಕೆ ಸಂವಾದಿಯಾಗಿ 'ಒಳೆಯಲ್' ಎಂಬುದಾಗಿ ಆದೇ ರೀತಿ ಶಬ್ದ : ೪ ಶಬ್ದಮಣಿದರ್ಪಣ : ಎ. ವೆಂಕಟದಾಳ್ ಮತ್ತು ಎಚ್. ಶೇಷಯ್ಯಂಗಾರ್ ಮುದ್ರಿಸಿದ ಗ್ರಂಥದಲ್ಲಿ ಈ ಪದಕ್ಕೆ ಸಂವಾದಿಯಾಗಿ 'ಒಳೆಗಳ್' ಎಂಬುದಾಗಿ ಹಾಗೂ ಶಬ್ದನು -೧-೨ ಶಬ್ದಾನುಶಾಸನದ ಲೂಯಿರೈಸ್ ಹಾಗೂ ರಾ. ನರಸಿಂಹಾಚಾರ್ಯರ ಮುದ್ರಣದಲ್ಲಿ 'ಒಳೆಯಲ್' ಎಂಬ ಪಾಠಾಂತರಗಳಿರುವುದನ್ನು ತೀ.ನಂ.ಶ್ರೀಯವರು ಗಮನಿಸುತ್ತಾರೆ. ಈ ಶಾಸನಪದ್ಯದ ನಾಲ್ಕನೆಯ ಪದದಲ್ಲಿ ಬರುವ ಕೆಲವು ಪಾಠಾಂತರಗಳನ್ನು ತೀ.ನಂ.ಶ್ರೀಯವರು ಈ ಕೆಳಕಂಡಂತೆ ಸೂಚಿಸುತ್ತಾರೆ.

ಉದಾ : ತನತ್ತು ಬಿಲ್ಲನದನಂತೆ ಕೀಸುವಂ

'ಕೀಸುವಂ' ಎನ್ನುವ ಪದ ಕಾವ್ಯಾವಲೋಕನ ಗ್ರಂಥದಲ್ಲಿ 'ಕೀಸುಗುಂ' ಎಂದು ಭಾಷಾಭಾಷಣದಲ್ಲಿ 'ಕೆತ್ತುಗುರ್' ಎಂಬ ಪಾಠಾಂತರಗಳನ್ನು ತೀ.ನಂ.ಶ್ರೀಯವರು ಕಂಡುಹಿಡಿದಿದ್ದಾರೆ.

ಉದಾ: ಈ ಪಾಠದಲ್ಲಿ 'ಕೀಸು'ತೆತ್ತು ಈ ಎರಡು ಧಾತುಗಳಲ್ಲಿ ಮೂಲಪಾಠಕ್ಕೆ ಸೇರಿದ್ದು ಯಾವುದೆಂದು ನಿರ್ಣಯಿಸುವುದು ಸುಲಭ. ಕೀಸು ಎಂದರೆ ತೆಳ್ಳಗೆ ಮಾಡು. ಹಿಡಿ ಎಂದು ಅರ್ಥ. ಕೀಸುಳಿ ಎಂಬ ಉಪಕರಣ ಹೆಸರೂ ಅಲ್ಲ ಅರ್ಥಕೊಡುವಂತಹುದು. 'ಕೀಸು' ಎಂಬುದಕ್ಕೆ ಕೆಲವು ಮಾತೃಕೆಗಳಲ್ಲಿ ' ಕೆತ್ತು' ಎಂಬ ಪದವನ್ನು ಸೂಚಿಸಿದ್ದಾರೆ.

ಇನ್ನು 'ಕೀಸುವಂ' ಎಂಬೆರಡಕ್ಕೂ ಒಂದೇ ಅರ್ಥವಾದರೂ ಪದ್ಯದ ಎರಡನೆಯ ಪಾದದಲ್ಲಿರುವ ಒಳಗುಂ ಎಂಬುದಕ್ಕೆ ಸಮತೂಕವಾಗಿ ನಿಲ್ಲುವ 'ಕೀಸುಗಂ' ಎಂಬುದು ಸಮಾನಾಂತರವಾಗಿದೆ. ಮೊದಲನೆಯ ಪದ್ಯದಲ್ಲಿ ಎಲ್ಲಾ ಪದಗಳಿಗೂ 'ಅದಾನ್' ಎಂಬ ಹಿಂದಿನ ಪದ್ಯದ 'ನ' ಕಾರವು ನಂಟು ಅಂಟಿಕೊಂಡಿದೆಯಷ್ಟೆ. ಅದನ್ನು ತೆಗೆದರೆ ಈ ರೀತಿ ಪದಗಳು ಗೋಚರವಾಗುತ್ತದೆ.

ಉದಾ: ಅಂತು-ಅಂತೆ, ಎಂತು, ಎತ್ತು, ಎತ್ತೆ, ಒತ್ತಿ, ಐತೆ ಇವುಗಳಲ್ಲಿ ಯಾವುದು ಸರಿ ಹಾಗೂ ಯಾವುದು ಮೂಲರೂಪವೆಂದು ಅಂಗೀಕರಿಸಿಕೊಳ್ಳುವುದು. ಅದರ ಪದ ಅದರದೆ ಅಪಪಾಠಗಳೆಂದು ನಿರ್ಣಯಿಸಬಹುದು ಎಂದು ಹೇಳಿದ್ದಾರೆ. ಈ ಶಾಸನದ ಪದ್ಯ ಮೊದಲನೆಯ ಚರಣದಲ್ಲಿ ಅನಿತ್ತನಿತ್ತಂ ಏನದೊಳ್ ಮನೋಚರಂ ಎಂದು ತೀ.ನಂ.ಶ್ರೀಯವರು ಇದನ್ನು ಕುರಿತಾದ ಕೆಲವು ಚಿಂತನೆಗಳನ್ನು ಹೊರಡಿಸುತ್ತಾರೆ.

ಇಲ್ಲಿ ಪರಿಯವಾಚಕವು ಬಂದಿರುವಾಗ ಅಂತು ಎಂಬ ರೀತಿಯಾದ ಪದ್ಯವು ಕೇವಲ ಪದ ಪೂರಕವಾಗಿ ನಿಲ್ಲುತ್ತದೆ. ಮೂಲಪದವೇನೆಂಬುದು ಗೊತ್ತಾಗುತ್ತದೆ. ನಿರರ್ಥಕವಾದರೂ ಚಿಂತೆಯಿಲ್ಲ. ಎತ್ತೇ ಎಂಬುದಕ್ಕೇನೋ ಸಂಭಾಷಣೆಯಿಲ್ಲದಿಲ್ಲ. ಅದನ್ನು ಅಂಗೀಕರಿಸಿದರೆ ಏನೇ ಎಷ್ಟೇ ದುರ್ಬಲನಾದುದನೆಂದರೆ ತನ್ನ ಬಿಲ್ಲನ್ನು ಭಾಗಿಸುವುದಿಲ್ಲ. ಅದನ್ನು ಎತ್ತುವ ಸಲುವಾಗಿ ಕೂಡ ಶಕ್ತಿ ಬೇಕಾಯಿತು ಎಂಬ ಅರ್ಥ ಹೊರಡುತ್ತದೆ.

ತೀ.ನಂ. ಶ್ರೀಯವರು ಈ ರೀತಿ ಪ್ರಶ್ನಿಸುತ್ತಾರೆ. ಅಂದರೆ ಬಿಲ್ಲನ್ನು ಎತ್ತುವುದಕ್ಕೆ ಆಗದವನಿಗೆ ಅದನ್ನು ಕೆತ್ತಲು ಹೇಗೆ ಸಾಧ್ಯವಾಯಿತು ಎಂಬ ಪ್ರಶ್ನೆಯೂ ಅವರಲ್ಲಿ

ಹುಟ್ಟುತ್ತದೆ. ಇದಕ್ಕೆ ಅನುಗುಣವಾಗಿ ತೀ.ನಂ.ಶ್ರೀಯವರು 'ಎತ್ತೆ' ಪದಕ್ಕೆ ಬದಲಾಗಿ 'ಒತ್ತಿ' ಎಂಬ ಪದವನ್ನು ಬಳಸಿದವರಲ್ಲಿ ಕವಿಯ ಆಶಯ ಇಲ್ಲಿ ಕುಗ್ಗುವುದಿಲ್ಲವೆಂದು ಹೇಳುತ್ತಾರೆ. ತೀ.ನಂ.ಶ್ರೀಯವರು ಈ ಪಕ್ಕದ ಮೂಲಪಾಠವನ್ನು ಈ ರೀತಿ ನಿರ್ದೇಶಿಸುತ್ತಾರೆ.

ಎನಿತ್ತೆನಿತ್ತಂಬುಜಪತ್ರನೇತ್ರಯಾ
ಘನಘ್ನನಂಗಳ್ ಬಳೆಗುಂ ಕಿರಾತೆಯಾ॥
ಅನಿತ್ತನಿತ್ತಂವನದೊಳ್ ವನೇಚರಂ
ತನತ್ತೊಬಿಲ್ಲಾದನೊತ್ತಿ ಕೀಸುಗೆಂ॥

ಈ ಪದ್ಯವು ಆರ್. ನರಸಿಂಹಚಾರ್ಯರ ಕವಿಚರಿತ್ರೆಯಲ್ಲಿ ಮೊದಲನೆಯ ಗುಣವರ್ಮನು ಎಂದು ಪ್ರತಿಪಾದಿಸಿದ್ದಾನೆ. ತೀ.ನಂ.ಶ್ರೀಯವರು ಅಭಿಪ್ರಾಯ ಪಡುತ್ತಾರೆ. ಗೋವಿಂದವರ್ಧನ 'ಹರಿವಂಶ' ಕೃತಿಯಲ್ಲಿ ಕಂಡುಬರುತ್ತದೆ. '' ಈ ಲೇಖನ ಪ್ರಕಟವಾದ ಮೇಲೆ ಹೆಚ್. ದೇವಿಪ್ಪನವರು ತೀ.ನಂ.ಶ್ರಿಯವರ ಪಾಠನಿರ್ಣಯವನ್ನು ಪ್ರಶ್ನಿಸಿ ಅದರ ವಾದಗಳನ್ನು ಅಲ್ಲಗೆಳೆದು ಪದ್ಯದ ನಾಲ್ಕೈದು ಪದದಲ್ಲಿ (೧) ಬಿಲ್ಲನಾದನಂತೆ (೨) ಕೀಸುವಂ ಎಂಬ ಮೂಲ ಪದಗಳೇ ಸರಿಯಾದುದು''[೧೩] ಎಂದು ಪ್ರತಿಪಾದವನ್ನು ಹೂಡಿದ್ದಾರೆ. ದೇವಿರಪ್ಪನವರ ಪ್ರತಿವಾದವನ್ನು ಟೀಕಿಸಿ ಸಿ.ಪಿ.ಕೆ. ಯವರು ತೀ.ನಂ.ಶ್ರೀಯವರ ನಿಲುವನ್ನು ಸಮರ್ಥಿಸಿದ್ದಾರೆ . ದೇವೀರಪ್ಪನವರ ಪ್ರಶ್ನೆಯನ್ನು ಸಿ.ಪಿ.ಕೆ. ಯವರು ಉಲ್ಲೇಖಿಸಿ ಅದಕ್ಕೆ ಅರ್ಥವನ್ನು ಕಲ್ಪಿಸಿದ್ದಾರೆ. ತೀ.ನಂ.ಶ್ರೀಯವರಿಗೆ ಇಷ್ಟವಾದ ಈ ಶಾಸನ ಪದ್ಯ ಶೃಂಗಾರಯುಕ್ತವಾದುದು ಎಂದು ಹೇಳಬಹುದು.

### ೪. ಅನಂತನಾಥ ಪುರಾಣ

ತೀ.ನಂ.ಶ್ರೀಯವರು ಪ್ರಾಧ್ಯಾಪಕರಾಗಿದ್ದು ಕನ್ನಡ ಗ್ರಂಥಗಳಿಗೆ ಸಂಬಂಧಪಟ್ಟಂತೆ ಪಾಠದೋಷಗಳನ್ನು ಗುರುತಿಸಿ ಅವುಗಳಿಗೆ ಸಮಂಜಸವಾದ ಉತ್ತರಗಳನ್ನು ಕೊಟ್ಟಿದ್ದಾರೆ. ತೀ.ನಂ.ಶ್ರೀಯವರು ಎಂ.ಎ. ತರಗತಿಗೆ ಪಾಠ ಮಾಡುತ್ತಿದ್ದಾಗ ಮುದ್ರಿತ ಗ್ರಂಥಗಳಲ್ಲಿ ಪರಿಷ್ಕೃತವಾಗದೆ ಉಳಿದಿದ್ದ ಪಾಠದೋಷಗಳನ್ನು ವಿದ್ಯಾರ್ಥಿಗಳ ಗಮನಕ್ಕೆ ತಂದು ಅವುಗಳನ್ನು ತಿದ್ದುಪಡಿ ಮಾಡಿ ಬೋಧಿಸುತ್ತಿದ್ದರಂತೆ ಎಂದು ಎಂ.ವಿ. ಸೀತಾರಾಮಯ್ಯನವರ ಅಭಿಪ್ರಾಯದಿಂದ ತಿಳಿದುಕೊಳ್ಳಬಹುದಾಗಿದೆ. ಅಂದರೆ ಎಂ.ವಿ.ಸೀ. ಅವರ ಗುರುಗಳಾದ

ತೀ.ನಂ.ಶ್ರೀಯವರ ಬೋಧನಾ ವಿಧಾನವನ್ನು ಈ ಲೇಖನದಲ್ಲಿ ಕೆಲವು ಹಳಗನ್ನಡ ಗ್ರಂಥಗಳ ಮೂಲಕ ಪರಿಚಯವಾಗುತ್ತದೆ. ಅವುಗಳಲ್ಲಿ ಅನಂತನಾಥ ಪುರಾಣವೂ ಒಂದು ಎಂದು ಹೇಳಬಹುದು.

''ಅನಂತನಾಥ ಪುರಾಣವನ್ನು ತೀ.ನಂ.ಶ್ರೀಯವರು ಎಂ.ವಿ.ಸೀ. ಯವರು ಶಿಷ್ಯರಾಗಿದ್ದ ಕಾಲದಲ್ಲಿ ಬೋಧಿಸುತ್ತಿದ್ದರಂತೆ.''೧೪ ಆ ತರಗತಿಯ ಅನುಭವವನ್ನು ಎಂ.ವಿ.ಸೀ. ಅವರ ತಮ್ಮ ಲೇಖನದಲ್ಲಿ ಹೇಳಿಕೊಂಡಿದ್ದಾರೆ. ಈ ಲೇಖನವು ಎಂ.ವಿ.ಸಿ. ಅವರಿಂದ ನಿರೂಪಿತವಾಗಿದೆ. ಅನಂತನಾಥ ಪುರಾಣ ೧೯೨೦ರಲ್ಲಿ ಪ್ರಕಟವಾಯಿತು. ಪ್ರಕಟಿತವಾದ ಕೂಡಲೇ ೧೯೩೩ರಲ್ಲಿ ಎಂ.ಎ. ಪರೀಕ್ಷೆಗೆ ಪಠ್ಯ ಗ್ರಂಥಗಳಲ್ಲಿ ಒಂದಾಗಿ ನಿಯಮಿತವಾಯಿತು ಎಂದು ಎಂ.ವಿ.ಸೀ. ಯವರು ಹೇಳುತ್ತಾರೆ. ಅದರಲ್ಲಿ ತೀ.ನಂ.ಶ್ರೀಯವರು ಅಧ್ಯಯನ ಮಾಡಬೇಕಾದ್ದು ಹಾಗೂ ಭಾಷಣ ಮಾಡಬೇಕಾದದ್ದು ೧೧-೧೪ನೇಯ ಶಾಸನಗಳಲ್ಲಿ ನಿರೂಪಿತವಾದ ಚಂಡ ಶಾಸನ ಕಥಾಭಾಗವೆಂದು ಎಂ.ವಿ.ಸೀ. ತಿಳಿಸುತ್ತಾರೆ.

ಈ ಗ್ರಂಥದಲ್ಲಿ ಹೆಚ್ಚಿನ ತಪ್ಪುಗಳು, ಪಾಠದೋಷಗಳು ಹೇರಳವಾಗಿವೆ ಎಂದು ತಿಳಿದು ಒಂದು ನಿರ್ಧಾರಕ್ಕೆ ಬರುತ್ತಾರೆ. ಅದೇನೆಂದರೆ ಜನ್ನ ತುಂಬ ವೃದ್ಧನಾದ ಮೇಲೆ ಈ ಕಾವ್ಯವನ್ನು ಬರೆದು ಎಂದು ತೀರ್ಮಾನಿಸುತ್ತಾರೆ. ಇದರಲ್ಲಿ ಲಿಪಿಕಾರರ ಕೈತಪ್ಪುಗಳನ್ನು ಸ್ವೀಕರಿಸಿ ತೀ.ನಂ.ಶ್ರೀಯವರು ತಮ್ಮ ಪ್ರತಿಭೆಯಿಂದ ಸರಿಯಾಗಿರುವುದನ್ನು ಕಂಡು ಹಿಡಿಯುತ್ತಾರೆ. ಏಕೆಂದರೆ ಗುರುಗಳಾದರೂ ಭೋದಿಸುವಾಗ ಉತ್ತಮವಾದ ಬೋದನೆ ಇವರ ಕರ್ತವ್ಯಗಳಾಗಿರುತ್ತವೆ. ಅದರಲ್ಲಿ ಅನೇಕ ತಿದ್ದುಪಾಡುಗಳನ್ನು ಮಾಡಿ ತರಗತಿಯಲ್ಲಿ ಬೋಧನೆ ಮಾಡುತ್ತಿದ್ದರಂತೆ

ಅನಂತನಾಥ ಪುರಾಣ ಸಂಪಾದಕರು ಮಾಡಲಾಗದೆ ಬಿಟ್ಟಿದ್ದ ಕಾವ್ಯವನ್ನು ಪಾಠ ಹೇಳುವಾಗ ತೀ.ನಂ.ಶ್ರೀಯವರು ನಿರ್ವಹಿಸಿರುವುದನ್ನು ಗಮನಿಸಿದಾಗ ಪಾಠಪರಿಷ್ಕರಣ ಶಾಸ್ತ್ರ ಪ್ರಜ್ಞೆ ಅವರಲ್ಲಿ ಒಂದು ಸಹಜ ಶಕ್ತಿಯಾಗಿ ರೂಪುಗೊಂಡಿರುವುದನ್ನು ನಾವು ಕಾಣಬಹುದಾಗಿದೆ. ಗ್ರಂಥ ಸಂಪಾದನ ಶಾಸ್ತ್ರವು ಶ್ಲಾಘನೀಯವಾದುದು ಎಂದು ಹೇಳಬಹುದಾಗಿದೆ. ಈ ಕೃತಿಗೆ ಸಂಬಂಧಪಟ್ಟಂತೆ ಪದ ಪರಿಷ್ಕರಣೆ ಮಾಡಿರುವುದು ತೀ.ನಂ.ಶ್ರೀಯವರು ಗುರುತು ಹಾಕಿಕೊಂಡಿರುವ ಪದ ಪರಿಷ್ಕರಣೆಗಳಲ್ಲಿ ಒಂದನ್ನು ಇಲ್ಲಿ ಉದಾಹರಣೆಯಾಗಿ ತೆಗೆದುಕೊಳ್ಳಲಾಗಿದೆ.

ಉದಾ : ಅನಂತನಾಥ ಪುರಾಣ

ಅಶ್ವಾಸ - ಪದ್ಯ ೧೭

೧) ಗಗನೀ ಚಿತ್ತಿಕೆ ಬಾಲ ಭಾನುಕಾರಮಂ
ಕಣ್ಣಿಟ್ಟು - ತೊಯ್ದಿಟ್ಟು (ಬಟ್ಟಿಗೆ) ಯಂಕಜ್ಜಳಸಜ್ಜಿತಾಬ್ಧಿ
ಘಳಕ ಪ್ರಾಗ್ಭಾಗದೊಳ್....(ಬರೆವೆವೊಲ್) ಚೆಲ್ವಾದುದಂ ನೋಡಿದಂ...

ಈ ಪದ್ಯದಲ್ಲಿ ಒಟ್ಟಿಗೆ ಎನ್ನುವ ಪದ ಸರಿಯಾದ ಅರ್ಥ ನೀಡುವುದಿಲ್ಲ. ಬದಲಾಗಿ ತೀ.ನಂ.ಶ್ರೀಯವರು ಇದು ಲಿಪಿಕಾರನ ಕೈ ತಪ್ಪಿನಿಂದ ಆಗಿರುವ ದೋಷ ಎಂದು ಗುರುತಿಸಿ ಅದಕ್ಕೆ ಬದಲಾಗಿ 'ಒಟ್ಟಿಗೆ' ಎಂಬ ಪದವನ್ನು ಬಳಸಿದರು. ಬರೆವವೊಲ್ ಎನ್ನುವ ಪದ ಓಡಿದ ವೊಲ್ ಎಂದಾಗಬೇಕು ಎಂದು ಅಕ್ಷರ ದೋಷಗಳನ್ನು ಪರಿಷ್ಕರಿಸುತ್ತಾರೆ. ಇನ್ನೂ ಹೆಚ್ಚಿನ ಲೋಪಗಳು ಈ ಪುಸ್ತಕದಲ್ಲಿ ಕಂಡುಬಂದಿದೆ ಅದನ್ನು ತಕ್ಕವ್ಪುಟಿಗೆ ನಿರ್ಧರಿಸಿದ್ದೇನೆ.

## ೫. ರಸರತ್ನಾಕರ

''ರಸರತ್ನಾಕರ'ವನ್ನು ತೀ.ನಂ.ಶ್ರೀಯವರು ತರಗತಿಯಲ್ಲಿ ಪಾಠ ಮಾಡಿದವರೆಂದು ಈ ಮೊದಲೇ ಎಂ.ವೀ.ಸೀ ಅವರ ಲೇಖನದಿಂದ ಗೊತ್ತಾಗುತ್ತದೆ. ಈ ಕೃತಿಯಲ್ಲಿ ತೀ.ನಂ.ಶ್ರೀಯವರು ಅನೇಕ ದೋಷಗಳನ್ನು ತಿದ್ದಿರುವುದಾಗಿ ಎಂ.ವಿ.ಸೀ. ಯವರ ಲೇಖನದಿಂದ ಗೊತ್ತಾಗುತ್ತದೆ.'' ತೀ.ನಂ.ಶ್ರೀಯವರು ಸೂಚಿಸಿದ ಸಣ್ಣಪುಟ್ಟ ಕೆಲವು ತಿದ್ದುಪಡಿಗಳ ವಿಚಾರವನ್ನು ಬಿಟ್ಟು ವಿಶೇಷವಾಗಿ ಕನ್ನಡದ ಶಾಸ್ತ್ರಗ್ರಂಥಗಳ ಪಾಠ ಪರಿಷ್ಕರಣ ವಿಧಾನದ ಮೇಲೆ ಮಾರ್ಗದರ್ಶಕರಾದ ಬೆಳಕು ಚೆಲ್ಲುವಂತಹ ಒಂದೆರಡು ನಿದರ್ಶನಗಳನ್ನು ಮಾತ್ರ ಇಲ್ಲಿ ವಿವರಿಸಬಹುದಾಗಿದೆ.

ಕನ್ನಡ ಅಲಂಕಾರ ಶಾಸ್ತ್ರ ಗ್ರಂಥಗಳು ಅನೇಕ ಕಾವ್ಯಗಳು ಕೂಡ ಮೂಲ ಸಂಸ್ಕೃತ ಗ್ರಂಥಗಳನ್ನು ಅನುಸರಿಸಿ ಬರೆದಂಥವು. ಅನೇಕ ಕೃತಿಯಲ್ಲಿ ಮೂಲಗ್ರಂಥದ ಭಾಗಗಳ ನೇರ ಭಾಷಾಂತರ ವಿರುದ್ಧವೂ ಉಂಟು ಆದ್ದರಿಂದ ಗ್ರಂಥಸಂಪಾದನೆಯನ್ನು ಉದ್ದಕ್ಕೂ ಮೂಲದೊಂದಿಗೆ ಆ ಗ್ರಂಥವನ್ನು ಹೋಲಿಸಿ ನೋಡುತ್ತಲೇ ಸಂಶೋಧನೆ ಮಾಡುತ್ತಾರೆ.

ರಸರತ್ನಾಕರದಲ್ಲಿ ಬರುವ ಶೃಂಗಾರ ಪ್ರಾಮುಖ್ಯತೆಯನ್ನು ತಿಳಿಸುವ ಹದಿಮೂರನೆಯ ಸೂತ್ರದ ವೃತ್ತಿಯಲ್ಲಿ 'ಶೃಂಗಾರ ರಸಮೆ' ಲೋಕಕ್ಕೆ ಸೊಗೆಯಿಪ್ಪುದಾದಕಾರಣವೆ ಮೊದಲೊಳೇ ಶೃಂಗಾರ ರಸಂಪೇಳೆ ಪಟ್ಟದ್ದು ಅಲ್ಲಿ ಮತ್ತೆ

ಕೆಲಂಬರ್ ಆರ್ದ್ರಸ್ಥಾಯಿ (೧) ಸ್ನೇಹಪರರ ಮೆಂಬರ್ ಅದರ ಅಂತ್ಯದಲ್ಲಿ ಅಂತರ್ಭಾವಾ....ಮಾತಾಪಿತೃಗಳೊಳ್ ಬಾಲಕಂ ಮಾಪ್ತಿಸ್ನೇಹಂ ಭಯದೊಳಂತರ್ಭವಾ ಪುತ್ರಾದಿ ಕಂಗಳಲ್ಲಿಯುಂ ವೃದ್ಧಂಗಂ ಇಂತಳೆವುದು ಆರ್ದ್ರಸ್ಥಾಯಿ (೨) ವಲ್ಯದಸವೆಂದೊಡದುವಂ ಹಾಸದಲ್ಲಿ ಮೇಣ್‌ರತಿಯಲ್ಲಿ ಮೇಣನೃತ್ಯದಲ್ಲಿ ಅಂತರ್ಭಾವಂ...

ಈ ಮೇಲಿನ ವಿವರಣೆಯಲ್ಲಿ ಬೇರೆ ಬೇರೆ ವ್ಯಕ್ತಿಗಳ ನಡುವೆ ಇರಬಹುದಾದ ವಿವಿಧ ಸ್ನೇಹಭಾವಗಳು ಹೇಗೆ ಅವು ರತಿಸ್ಥಾಯಿ ಭಾವದಲ್ಲಿ ಅಂತರ್ಗತವಾಗುತ್ತಿವೆ ಎಂಬುದನ್ನು ಹೇಳಿದೆ. ಆರ್ದ್ರಸ್ಥಾಯಿ ಈ ಪ್ರಯೋಗಕ್ಕೆ ಪಾಠಾಂತರಗಳಲ್ಲಿವೆ ಎಂಬುದನ್ನು ತಿಳಿಸಿದ್ದಾರೆ.

ಅದೇ ರೀತಿಯಾಗಿ ಆರ್ದ್ರಗುಣವುಳ್ಳ 'ಸ್ಥಾಯಿಭಾವ ಸಂಬಂಧವನ್ನು ಹೊಂದಿದ ಸ್ನೇಹರಸ ಇಲ್ಲ ಎಂಬ ಮೊದಲಿನ ಸಂದರ್ಭದಲ್ಲಿ ಸಂಸ್ಕೃತ ಮೂಲ ಪಾಠವನ್ನು ಸಾಳ್ವ ಅನುಸರಿಸುವಿರುವುದಾಗಿ ತೀ.ನಂ.ಶ್ರೀಯವರು ತಿಳಿಸುತ್ತಾರೆ.

ರಸರತ್ನಾಕರದಲ್ಲಿ ಬರುವ ಪದ್ಯದ ಕೆಲವು ದೋಷಗಳನ್ನು ಈ ಕೆಳಕಂಡಂತೆ ಸೂಚಿಸಲಾಗಿದೆ. ಈ ರೀತಿಯಾದ ತಪ್ಪುಗಳನ್ನು ಕಂಡುಹಿಡಿದು ಅದಕ್ಕೆ ಸಮಂಜಸವಾದ ಉತ್ತರಗಳನ್ನು ಕೊಟ್ಟಿರುವುದು ತೀ.ನಂ.ಶ್ರೀಯವರ ವಿದ್ವತ್ತಿಗೆ ಪ್ರತೀಕವಾಗಿದೆ.

ಉದಾ : (೨) ಸೂತ್ರ - ೬೯

ಎರಡು ವಿರುದ್ಧ ರಸಮೋಡ
ವೆದಸಿರೆ ತದನಂತರಂ ಸ್ಥಮೊಂದಸ್ಯರಸಂ
ಪರಿಪುಷ್ಟಮೊಗೆಯುಂ ವ್ಯಾಧಿ
ಕರಣಂ ಮೇಣ್ ಸಮಯಂಮಾಗೆಯುಂ ನಿರ್ದೋಷಂ

ಈ ಸೂತ್ರ ಹಾಗೂ ಇದಕ್ಕೆ ಕೊಟ್ಟಿರುವ ಎರಡು ಅಕ್ಷರ ಪದ್ಯಗಳು ಇದನ್ನು ಸಾಳ್ವ ಕಾವ್ಯಾವಲೋಕನದಿಂದ ಆರಿಸಿಕೊಂಡಿರುವುದಾಗಿ ತೀ.ನಂ.ಶ್ರೀಯವರು ಅಭಿಪ್ರಾಯಪಡುತ್ತಾರೆ. ಈ ಅಂಶವನ್ನು ರಸರತ್ನಕರನ ಸಂಪದಕರು ಸೂಚಿಸಿದ್ದಾರೆ. ಆದರೂ ಇಲ್ಲಿ ಉದ್ಧರಿಸಿದ ಪದ್ಯಗಳನ್ನು ಕಾವ್ಯಲೋಕನ ಪದ್ಯಗಳ ಪಾಠದೊಂದಿಗೆ ಹೋಲಿಸಿ ನೋಡುವ ಕ್ರಮವನ್ನು ತೆಗೆದುಕೊಳ್ಳಲಿಲ್ಲ. ಅಲ್ಲದೆ 'ವ' ಇಲ್ಲಿ ವಿರುದ್ಧಗಳಾದ ಶೃಂಗಾರ ಭೀಬತ್ಸರಸಗಳ ನಡುವೆ ವೀರರ ಸಂಪೊಕ್ಕು ಪುಷ್ಟಿಯಾದುದು ಮತ್ತು 'ವ' ಇಲ್ಲಿ

ವೃಧೀಕರಣ ಮಾದುದಳೆಂ ನಿರ್ದೋಷಂ ಎಂದು ಲಕ್ಷ್ಯ ಕೆಳಗೆ ಸಾಳ್ವನು ಕೊಟ್ಟಿರುವ ವಿವರಣೆಯನ್ನು ಸೂಕ್ಷ್ಮವಾಗಿ ಗಮನಿಸಲಿಲ್ಲ ಎಂದು ತೀ.ನಂ.ಶ್ರೀಯವರು ಅಭಿಪ್ರಾಯ ಪಡುತ್ತಾರೆ. ತೀ.ನಂ.ಶ್ರೀಯವರು ಈ ಎರಡು ಪ್ರಾಚೀನ ಕೃತಿಗಳಿಗೆ ಸಂಬಂಧಪಟ್ಟ ಅನೇಕ ದೋಷಗಳನ್ನು ಗುರುತಿಸಿ ಈ ಕೃತಿಗಳಿಗೆ ಒಂದು ಚೌಕಟ್ಟನ್ನು ತಂದುಕೊಟ್ಟಿರುವುದು ನಮ್ಮ ಎಂ.ವಿ.ಸೀ.ಯವರ ಲೇಖನದಿಂದ ಅವರ ಅನುಭವಗಳಿಂದ ಕಾಣಬಹುದಾಗಿದೆ.

## ಅಡಿಟಿಪ್ಪಣಿಗಳು

೧. ಡಾ. ಎಂ. ಚಿದಾನಂದಮೂರ್ತಿ : 'ಶ್ರೀಕಂಠತೀರ್ಥ', ಐ.ಬಿ.ಎಚ್. ಪ್ರಕಾಶನ, ಪುಟ-೧೯೬, ಬೆಂ-೧೯೭೬

೨. ಡಾ. ಎಂ. ಚಿದಾನಂದಮೂರ್ತಿ : 'ಶ್ರೀಕಂಠತೀರ್ಥ', ಐ.ಬಿ.ಎಚ್. ಪ್ರಕಾಶನ, ಪುಟ-೨೨೪, ಬೆಂ-೧೯೭೬

೩. ಡಾ. ಎಂ. ಚಿದಾನಂದಮೂರ್ತಿ : 'ಶ್ರೀಕಂಠತೀರ್ಥ', ಐ.ಬಿ.ಎಚ್. ಪ್ರಕಾಶನ, ಪುಟ-೧೯೭, ಬೆಂ-೧೯೭೬.

೪. ಡಾ. ದೇ.ಜ.ಗೌ : 'ಶ್ರೀಕಂಠ ದರ್ಶನ' ತಳುಕಿನ ವೆಂಕಣ್ಣಯ್ಯ, ಸ್ಮಾರಕ ಗ್ರಂಥಮಾಲೆ. ಪು.ಸಂ. ೧೯೦, ಮೈಸೂರು-೨೦೦೬.

೫. ತೀ.ನಂ.ಶ್ರೀಕಂಠಯ್ಯ : 'ಸಮಾಲೋಕನ' ಶೃಂಗೇರಿ ಪ್ರಕಾಶನ, ಚಿಕ್ಕನಾಯಕನಹಳ್ಳಿ, ತುಮಕೂರು-೧೯೫೮

೬. ಡಾ. ಎಂ. ಚಿದಾನಂದಮೂರ್ತಿ : 'ಶ್ರೀಕಂಠತೀರ್ಥ', ಐ.ಬಿ.ಎಚ್. ಪ್ರಕಾಶನ, ಪುಟ-೨೨೭, ಬೆಂ-೧೯೫೮.

೭. ಗಿರಿಡ್ಡಿ ಗೋವಿಂದರಾಜು : 'ಜನಪದ ಕಾವ್ಯ', ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾಲಯ, ಪು. ೧೩೩, ಧಾರವಾಡ-೧೯೭೧.

೮. ಪ್ರೊ. ಸಿ.ಪಿ.ಕೆ. : ಜನಪದ ಕಾವ್ಯ ತ.ವೆಂ. ಸ್ಮಾರಕ ಗ್ರಂಥಮಾಲೆ, ಪು. ೨೬-೨೮, ಮೈಸೂರು -೧೯೭೫.

೯. ತೀ.ನಂ.ಶ್ರೀಕಂಠಯ್ಯ : 'ಸಮಾಲೋಕನ' ಶೃಂಗೇರಿ ಪ್ರಕಾಶನ, ಚಿಕ್ಕನಾಯಕನಹಳ್ಳಿ, ಪುಟ-೧೬೫, ತುಮಕೂರು-೧೯೫೮.

೧೦. ಡಾ. ಎಂ. ಚಿದಾನಂದಮೂರ್ತಿ : 'ಶ್ರೀಕಂಠತೀರ್ಥ', ಐ.ಬಿ.ಎಚ್. ಪ್ರಕಾಶನ, ಪುಟ-೨೦೦, ಬೆಂ-೧೯೭೬.

೧೧. ತೀ.ನಂ.ಶ್ರೀಕಂಠಯ್ಯ : 'ಸಮಾಲೋಕನ' ಶೃಂಗೇರಿ ಪ್ರಕಾಶನ, ಚಿಕ್ಕನಾಯಕನಹಳ್ಳಿ, ಪುಟ-೧೬೦, ತುಮಕೂರು-೧೯೫೮.

೧೨ ತೀ.ನಂ.ಶ್ರೀಕಂಠಯ್ಯ : 'ಸಮಾಲೋಕನ' ಶೃಂಗೇರಿ ಪ್ರಕಾಶನ, ಚಿಕ್ಕನಾಯಕನಹಳ್ಳಿ, ಪುಟ-೧೭೧, ತುಮಕೂರು-೧೯೫೮.

೧೩. ಡಾ. ಎಂ. ಚಿದಾನಂದಮೂರ್ತಿ : 'ಶ್ರೀಕಂಠತೀರ್ಥ', ಐ.ಬಿ.ಎಚ್. ಪ್ರಕಾಶನ, ಪುಟ-೧೯೦, ಬೆಂ-೧೯೭೬.

೧೪. ಡಾ. ಎಂ. ಚಿದಾನಂದಮೂರ್ತಿ : 'ಶ್ರೀಕಂಠತೀರ್ಥ', ಐ.ಬಿ.ಎಚ್. ಪ್ರಕಾಶನ, ಪುಟ-೧೯೩, ಬೆಂ-೧೯೭೬.

# ಅಧ್ಯಾಯ - ಐದು

## ತೀ.ನಂ.ಶ್ರೀಯವರ ಗ್ರಂಥಸಂಪಾದನೆಯ ವೈಶಿಷ್ಟ್ಯ

ಈ ಅಧ್ಯಾಯದಲ್ಲಿ ಮೂರು ಉಪ ಅಧ್ಯಾಯಗಳನ್ನು ಮಾಡಿಕೊಂಡಿದ್ದೇನೆ. ಅದರ ವಿವರ ಈ ಕೆಳಕಂಡಂತೆ ಇದೆ.

೧. ಪಾಠಾಂತರಗಳು

೨. ಚಿಹ್ನೆಗಳ ಬಳಕೆ

೩. ಸಂಪಾದನೆಯ ವಿವರ

ಗ್ರಂಥಸಂಪಾದನ ಶಾಸ್ತ್ರದಲ್ಲಿ ಇವರ ವಿದ್ವತ್ ಅಪ್ರತಿಮವಾದುದು. '' ಸ್ವಾಧ್ಯಾಯತ್ನ ಪ್ರಮಾದಃ' ಎಂಬ ಉಪನಿಷತ್ತಿನ ಅನುಶಾಸನವನ್ನು ಅವರು ಚಾಚೂತಪ್ಪದೇ ಪಾಲಿಸುತ್ತಿದ್ದರು. ಸಾರಸ್ವತ ವನದಲ್ಲಿ ಅವರು ದುಂಬಿಯಂತೆ ಸಂಚರಿಸುತ್ತಿದ್ದರು. ಜೇನು ನೊಣದಂತೆ ಬಗೆಬಗೆಯ ರಸಗಳನ್ನು ಹೀರಿದರು. ಜೇನಾಗಿ ಪರಿವರ್ತಿಸಿದರು. ಹಳಗನ್ನಡ, ಹೊಸಗನ್ನಡ ಸಾಹಿತ್ಯ, ಗ್ರಂಥ ಸಂಪಾದನ ಶಾಸ್ತ್ರ ಇತ್ಯಾದಿ ಕ್ಷೇತ್ರಗಳಲ್ಲಿ ಸಾಧನೆಗೈದವರು"ಎಂದು ಎಚ್ಚೆಸ್ಕೆ ಅವರು ಹೇಳುತ್ತಾರೆ.

ಇದರಿಂದ ನಮಗೆ ತಿಳಿದುಬರುವ ಅಂಶವೇನೆಂದರೆ ತೀ.ನಂ.ಶ್ರೀಯವರು ಬಹುಮುಖ ಪ್ರತಿಭೆಯುಳ್ಳವರು ಎಂದು ಹೇಳಬಹುದು. ಅದರಲ್ಲೂ ಕನ್ನಡ ಗ್ರಂಥಸಂಪಾದನ ಶಾಸ್ತ್ರದಲ್ಲಿ ತೀ.ನಂ.ಶ್ರೀಯವರು ಮಾಡಿರುವ ಸೇವೆ ಅಪಾರವಾದುದು. ಅದರಲ್ಲಿ ಹಳಗನ್ನಡ ಕೃತಿಗಳನ್ನು ಸಂಪಾದನೆ ಮಾಡುವಾಗ ತೀ.ನಂ.ಶ್ರೀ ಬಹು ಎಚ್ಚರಿಕೆಯಿಂದ ಅವನ್ನೆಲ್ಲ ಪರಿಶೀಲಿಸಿ ಅನೇಕ ಲೋಪದೋಷಗಳನ್ನು ಕಂಡುಹಿಡಿದು, ಅದಕ್ಕೆ ಅನುಗುಣವಾದ ಅಥವಾ ಸಮಂಜಸವಾದ ಪದಗಳನ್ನು ಬಳಸಿರುವ ಅವರ ವಿದ್ವತ್ ಬಹಳ ಸೂಕ್ಷ್ಮವಾದುದು ಎಂದು ಹೇಳಬಹುದು. ತೀ.ನಂ.ಶ್ರೀಯವರು ಗ್ರಂಥ ಸಂಪಾದನೆಗೆ ಅನುಗುಣವಾಗುವಂತೆ ಬಳಸಿರುವ ಪಾಠಾಂತರ, ಚಿಹ್ನೆಗಳ ಬಳಕೆ ಇವುಗಳನ್ನು ಕುರಿತು ಕೊಟ್ಟ ಮಾಹಿತಿಗಳನ್ನು ಈ ಅಧ್ಯಾಯದಲ್ಲಿ ನೀಡಲಾಗುತ್ತದೆ.

### ೧. ಪಾಠಾಂತರಗಳು

'' ತೀ.ನಂ.ಶ್ರೀಯವರು ಹಳಗನ್ನಡ ಕೃತಿಗಳ ಸಂಪಾದನೆಯಲ್ಲಿ ಹಾಗೂ ಅವರು ತರಗತಿಯ ಬೋಧನೆ ಮಾಡುವಂತಹ ಸಂದರ್ಭದಲ್ಲಿ ಕೆಲವು ಹಳೆಯ ಕೃತಿಗಳಲ್ಲಿ ಕಂಡುಬರುವ ಕೆಲವು ದೋಷಗಳನ್ನು ಗುರುತಿಸಿ ಅದಕ್ಕೆ ಪಾಠಾಂತರಗಳನ್ನು

ಕೊಡುವುದನ್ನು ಈ ಕೆಳಕಂಡಂತೆ ಗಮನಿಸಬಹುದು. ತೀ.ನಂ.ಶ್ರೀಯವರ ಶಿಷ್ಯರಾದ ಎಂ.ವಿ. ಸೀತರಾಮಯ್ಯನವರು ತಮ್ಮ ಗುರುಗಳ ಪಾಠ ಬೋಧನಾ ವಿಧಾನವನ್ನು ಈ ಕೆಳಕಂಡಂತೆ ಹೇಳಿಕೊಂಡಿದ್ದಾರೆ.''[3]

ಯಾವುದೇ ಪೂರ್ವಸಿದ್ಧತೆ ಇಲ್ಲದೆ ಅವರೂ ಎಂದು ತರಗತಿಗೆ ಬರುತ್ತಿರಲಿಲ್ಲ. ಪಾಠದ ವಿಷಯವನ್ನು ಅದರ ಸ್ಥೂಲವಿವರಗಳೊಂದಿಗೆ ಅದನ್ನು ಖಚಿತಪಡಿಸಿಕೊಳ್ಳದೆ ತರಗತಿಯೊಳಗೆ ಬರುತ್ತಿರಲಿಲ್ಲವಂತೆ. ಇದರ ಜೊತೆಗೆ ಹಳಗನ್ನಡ ಕೃತಿಗಳನ್ನು ಕುರಿತಾದ ಕೆಲವು ವಿಚಾರಗಳನ್ನು ಕುರಿತು ದೀರ್ಘವಾದ ಸಂಭಾಷಣೆಯನ್ನು ಮಾಡುತ್ತಿದ್ದರಂತೆ ಹಾಗೂ ಯಾವುದೇ ಕಾವ್ಯವನ್ನು ಅಥವಾ ಪದ್ಯವನ್ನು ಪ್ರಾರಂಭಿಸುವುದಕ್ಕೆ ಮುನ್ನ ಕಾವ್ಯರಚನೆಗೆ ಅಗತ್ಯವಾದ ಕವಿಯ ಅರ್ಹತೆಗಳನ್ನು ತಿಳಿಸುತ್ತಿದ್ದರಂತೆ. ಆ ಕವಿಗಳ ಪ್ರತಿಭೆ ಹಾಗೂ ಪೂರ್ವ ಕವಿಗಳ ಕೃತಿಗಳ ಪರಿಚಯ, ಅನೇಕ ಶಾಸ್ತ್ರಗಳ ಬಗ್ಗೆ ಜ್ಞಾನ ಹಾಗೂ ಇದರಿಂದ ಒಡಮೂಡಿದ ಪಾಂಡಿತ್ಯ, ನಿರಂತರವಾದ ಅಭ್ಯಾಸಕ್ರಮ, ಈ ಎಲ್ಲಾ ಅರ್ಹತೆಗಳೂ ಅಗತ್ಯಕ್ಕೆ ತಕ್ಕಷ್ಟು ಇದ್ದುವು ಎಂಬುದನ್ನು ತರಗತಿಯ ಅನುಭವದಿಂದ ಎಂ.ವಿ.ಸೀ. ಅವರು ತಮ್ಮ ಗುರುಗಳ ಬಗ್ಗೆ ಈ ಮೇಲ್ಕಂಡ ವಿಚಾರಗಳನ್ನು ತಿಳಿಸಿದ್ದಾರೆ.

ಇದರಲ್ಲಿ ಕಂಡುಬರುವ ಮುಖ್ಯ ಅಂಶವೇನೆಂದರೆ ತೀ.ನಂ.ಶ್ರೀಯವರು ಒಂದು ಕೃತಿಯನ್ನು ಕುರಿತಾದ ಪರಿಚಯ, ಕವಿಯ ಪೂರ್ವ ಹಿನ್ನೆಲೆ, ಆ ಪಠ್ಯದ ವಸ್ತು ವಿಷಯ, ಅದನ್ನು ಕುರಿತಾದ ವಿಮರ್ಶೆ, ಅದರಲ್ಲಿ ಕಂಡುಬರುವ ಕೆಲವು ಲೋಪದೋಷಗಳು ಹಾಗೂ ಆ ಕೃತಿಯ ಕಾಲವನ್ನು ಕುರಿತು ಹತ್ತಾರು ರೀತಿಯಲ್ಲಿ ಒಂದು ಕೃತಿಗೆ ಸಂಬಂಧಪಟ್ಟಂತೆ ನಿರಂತರವಾಗಿ ಒಂದು ಕೃತಿಯ ಬಗ್ಗೆ ಪೂರ್ವಮಾಹಿತಿಯನ್ನು ಒದಗಿಸಿಕೊಡುವುದಲ್ಲದೆ, ಆ ಕೃತಿಯ ಜೊತೆಗೆ ಕೃತಿಕಾರನ ಪೂರ್ವ ಹಿನ್ನೆಲೆ ನಮಗೆ ಪರಿಚಯವಾಗುತ್ತಾ ಹೋಗುತ್ತದೆ.

ಪಾಠಾಂತರ ಎಂಬ ಈ ಭಾಗದಲ್ಲಿ ತೀ.ನಂ.ಶ್ರೀಯವರು ಹಳಗನ್ನಡ ಕೃತಿಗಳಾದ 'ರನ್ನನ ಗದಾಯುದ್ಧ' ನಂಬಿಯಣ್ಣನ ರಗಳೆ ಈ ಕೃತಿಗಳಿಗೆ ಸಂಬಂಧಪಟ್ಟಂತೆ ಒಂದೊಂದು ಗ್ರಂಥಕ್ಕೆ ಎಷ್ಟು ಹಸ್ತಪ್ರತಿಗಳು ದೊರೆಯುತ್ತವೆಯೋ ಅಷ್ಟನ್ನೂ ಸಂಪಾದಕನು ಪರಿಶೀಲಿಸುವುದು ಅಗತ್ಯವಾದುದು.

ಈ ರೀತಿಯಾದ ವಿಧಾನವೂ ಗ್ರಂಥಸಂಪಾದನ ಕ್ಷೇತ್ರದಲ್ಲಿ ಒಂದು ಕೃತಿಯ ಪ್ರಾಚೀನತೆಯನ್ನು ತೋರಿಸುತ್ತದೆ. ಒಂದು ಕೃತಿಯನ್ನು ಹಾಗೂ ಅದರಲ್ಲಿ ಕಂಡುಬಂದಿರುವ ವಿಚಾರಗಳನ್ನು ಪರಿಶೀಲಿಸಿ ಒಪ್ಪಿಕೊಳ್ಳಬೇಕಾಗುತ್ತದೆ. ಈ ರೀತಿಯಾದ

ಪಾಠಾಂತರಗಳಿಂದ ಒಂದು ಕೃತಿಯ ಕಾಲ ಹಾಗೂ ಆ ಕೃತಿಗೆ ಸಂಬಂಧಪಟ್ಟ ಕವಿಯ ಪೂರ್ವ ಇತಿಹಾಸವನ್ನು ಅರಿಯಲು ಸಾಧ್ಯವಾಗುತ್ತದೆ. ಒಂದು ಕೃತಿಗೆ ಸಂಬಂಧಪಟ್ಟಂತೆ ಹಲವಾರು ಹಸ್ತಪ್ರತಿಗಳು ಮುಂದಿನ ಕಾಲಘಟ್ಟದಲ್ಲಿ ಸಿಕ್ಕರೆ ಅದನ್ನು ಗ್ರಂಥಸಂಪಾದಕರು ಕವಿಯ ಪಾಠಕ್ಕೆ ಹತ್ತಿರವಾದುದನ್ನು ಆರಿಸಿಕೊಂಡು ಮಿಕ್ಕ ಹಸ್ತಪ್ರತಿಗಳನ್ನು ಒಂದು ಹಸ್ತಪ್ರತಿಗೆ ಉಪಪಾಠಗಳಾಗಿ ಮಾಡಿಕೊಳ್ಳುತ್ತಾನೆ. ಯಾವ ಹಸ್ತಪ್ರತಿ ಉತ್ತಮವಾಗಿ ದೋಷಮುಕ್ತವಾಗಿರುತ್ತದೋ ಅದನ್ನು ಕವಿಪಾಠಕ್ಕೆ ಹತ್ತಿರವಾದುದೆಂದು ನಿರ್ಧರಿಸುತ್ತಾನೆ. ಮಿಕ್ಕ ಹಸ್ತಪ್ರತಿಗಳು ದೋಷದಿಂದ ಕೂಡಿರುವುದರಿಂದ ಅದನ್ನು ಕುರಿತು ಸಂಶೋಧಕರು ಪರಿಶೀಲಿಸುತ್ತಾರೆ. ಅದರಲ್ಲಿ ಕಂಡುಬರುವ ಪ್ರಮುಖ ಅಂಶಗಳನ್ನು ಆಯ್ಕೆಮಾಡಿಕೊಳ್ಳುತ್ತಾರೆ.

ಉತ್ತಮವಾಗಿ ಕಂಡುಬಂದ ಪ್ರತಿಯ ಪಾಠವನ್ನು ಆಧಾರವಾಗಿರಿಸಿಕೊಂಡು ಅದರೊಡನೆ ಇತರ ಪ್ರತಿಗಳ ಪಾಠವನ್ನು ಹೋಲಿಸಿ ನೋಡಿ ಪಾಠಾಂತರಗಳನ್ನು ಬರೆದುಕೊಳ್ಳಬೇಕಾಗುತ್ತದೆ. ಹೀಗೆ ಎಲ್ಲಾ ಪ್ರತಿಗಳ ಪಾಠಾಂತರಗಳನ್ನು ಒಂದು ಪ್ರತಿಯಲ್ಲಿ ಒಟ್ಟಾಗಿ ಕೂಡಿಸುವುದಕ್ಕೆ ಪಾಠಾಂತರ ಸಂಕಲನವೆಂದು ಕರೆಯುತ್ತಾರೆ.

ಉದಾ : ತೀ.ನಂ.ಶ್ರೀಯವರು ನಂಬಿಯಣ್ಣನ ರಗಳೆಯನ್ನು ಸಂಪಾದನೆ ಮಾಡುವಾಗ ಅದಕ್ಕೆ ಸಂಬಂಧಪಟ್ಟ ಐದು ಹಸ್ತಪ್ರತಿಗಳನ್ನು ದೊರಕಿಸಿಕೊಂಡು ಮೊದಲು ಅವುಗಳ ಪರಿಶೀಲನೆ ಮಾಡಿದ್ದಾರೆ. ಆ ಐದು ಹಸ್ತಪ್ರತಿಗಳ ನಡುವೆ ಇರುವ ಸಂಬಂಧವನ್ನು ಗುರುತಿಸಿದ್ದಾರೆ.

ಇದರ ಜೊತೆಗೆ ಹಸ್ತಪ್ರತಿಗಳ ಸ್ವರೂಪ, ಅದರಲ್ಲಿ ಕಂಡುಬರುವ ಲಿಪಿಕಾರರ ಸ್ವಂತ ಬರಹದ, ಪೀಠಿಕಾವಾಕ್ಯಗಳು ಮತ್ತು ಸಮಾಪ್ತಿ ವಾಕ್ಯಗಳು ಅದರಲ್ಲಿ ಕಂಡುಬರುವ ಅಕ್ಷರಗಳ ಸ್ವರೂಪ, ಬರವಣಿಗೆಯ ಶುದ್ಧತೆಯ ಮಟ್ಟವನ್ನು ತೀ.ನಂ.ಶ್ರೀಯವರು ಗುರುತಿಸಿದ್ದಾರೆ.

ನಂಬಿಯಣ್ಣನ ರಗಳೆಗೆ ಸಂಬಂಧಪಟ್ಟಂತೆ 'ಕ' ಪ್ರತಿ ಕವಿಪಾಠಕ್ಕೆ ಹತ್ತಿರವಾದುದೆಂದು ನಿರ್ಧರಿಸಿದುದನ್ನು ತೀ.ನಂ.ಶ್ರೀಯವರು ಆಧಾರ ಪ್ರತಿಯನ್ನಾಗಿ ಇಟ್ಟುಕೊಂಡು ಉಳಿದ ಪ್ರತಿಗಳಲ್ಲಿನ ಅವರ ಬೋಧನೆಯಲ್ಲಿ ಗುರುತಿಸಿದ್ದಾರೆ.

ಅದೇ ರೀತಿ ನಂಬಿಯಣ್ಣನ ರಗಳೆಗೆ ಸಂಬಂಧಪಟ್ಟ ಐದು ಹಸ್ತಪ್ರತಿಗಳಲ್ಲಿ ಕಂಡುಬರುವ ಕೆಲವು ಅಕ್ಷರದೋಷಗಳನ್ನು ಕಂಡುಹಿಡಿದು ಯಾವುದು ಕವಿಯ ಪಾಠಕ್ಕೆ ಹತ್ತಿರವಾದುದು ಎಂದು ನಿರ್ಧರಿಸಬಹುದು.

ಉದಾ : ಕ, ಖ, ಗ, ಚ, ಜ ಐದು ಹಸ್ತಪ್ರತಿಯು

ಈ ಐದು ಹಸ್ತಪ್ರತಿಗಳನ್ನು ಪರಿಶೀಲಿಸುವುದರಿಂದ ಕೆಲವು ಅಕ್ಷರ ದೋಷಗಳು ಕಂಡುಬರುವುದನ್ನು ಕಾಣಬಹುದಾಗಿದೆ.

| | | | |
|---|---|---|---|
| ಉದಾ : | ಕ | ಹಸ್ತಪ್ರತಿಯಲ್ಲಿ - | ಎನಗೆ |
| | ಖ | ಹಸ್ತಪ್ರತಿಯಲ್ಲಿ - | ಯೆನಗೂ |
| | ಗ | ಹಸ್ತಪ್ರತಿಯಲ್ಲಿ - | ಎನಗೆ |
| | ಚ | ಹಸ್ತಪ್ರತಿಯಲ್ಲಿ - | ಯೆನಗೆ |
| | ಜ | ಹಸ್ತಪ್ರತಿಯಲ್ಲಿ - | ಎನಗೂ |

ಒಂದು ಮೂಲ ಪ್ರತಿಯ ಯಾವ ಯಾವ ಅಕ್ಷರಗಳಿಗೆ ಇವರ ಪ್ರತಿಗಳಲ್ಲಿ ಏನೇನು ಬರೆದಿದೆ ಎಂಬುದನ್ನು ಸ್ಪಷ್ಟವಾಗಿ ತಿಳಿಯುತ್ತದೆ. ಹಸ್ತಪ್ರತಿಗಳು ಕಡಿಮೆ ಪ್ರಮಾಣದಲ್ಲಿ ಇದ್ದರೂ ಉತ್ತಮ ಪ್ರತಿಯನ್ನು ಆರಿಸುವ ವಿಧಾನ ಈ ಮೇಲಿನ ರೀತಿ ನಾವು ಕಂಡುಹಿಡಿಯಬೇಕಾಗುತ್ತದೆ. ಆಗ ಆ ಹಸ್ತಪ್ರತಿಗಳಲ್ಲಿ ಯಾವುದು ಕಡಿಮೆ ದೋಷದಿಂದ ಕೂಡಿದೆಯೇ ಅದು ಕವಿಪಾಠಕ್ಕೆ ಹತ್ತಿರವಾಗಿದೆಯೆಂದು ನಿರ್ಧರಿಸಬೇಕಾಗುತ್ತದೆ. ಯಾವುದು ಹೆಚ್ಚಿನ ದೋಷದಿಂದ ಕೂಡಿದೆಯೋ ಅದುಕವಿಪಾಠಕ್ಕೆ ಹತ್ತಿರವಾದುದಲ್ಲ ಎಂದು ನಿರ್ಧರಿಸಬೇಕು.

ತೀ.ನಂ.ಶ್ರೀಯವರು ಸಂಪಾದಿಸಿರುವ 'ಗದಾಯುದ್ಧ ಸಂಗ್ರಹಂ' ಎಂಬ ಕೃತಿಯಲ್ಲಿಯೂ ಕೂಡ ಈ ರೀತಿಯಾದ ವಿಧಾನವನ್ನು ಅನುಸರಿಸಿದ್ದಾರೆ. ಅಂದರೆ ತೀ.ನಂ.ಶ್ರೀಯವರು ಈ ಕೃತಿಯನ್ನು ಸಂಪಾದಿಸುವಾಗ ಈ ಕೃತಿಯನ್ನು ಇವರಿಗಿಂತ ಮೊದಲು ಸಂಪಾದಿಸಿದವರ ಕೃತಿಗಳನ್ನು ಪರಿಶೀಲಿಸಿದ್ದಾರೆ. ಅದೂ ಅಲ್ಲದೆ ಕವಿಗೆ ಸಂಬಂಧಪಟ್ಟಂತೆ ಹಾಗೂ ಅವನ ಪದ್ಯಕ್ಕೆ ಸಂಬಂಧಪಟ್ಟಂತೆ ಉಲ್ಲೇಖಗೊಂಡಿರುವ ಹಿಂದಿನ ಕಾವ್ಯಸಂಕಲನಗಳನ್ನು ಇದರ ಜೊತೆಗೆ ಸಂಸ್ಕೃತ ಆಕರಗಳನ್ನು ತಮ್ಮ ಸಂಪಾದನೆಯ ಸಾಮಗ್ರಿಯಾಗಿ ಬಳಸಿಕೊಂಡಿದ್ದಾರೆ.

ಈ ಕೃತಿಯನ್ನು ಸಂಪಾದಿಸುವಾಗ ಪದ್ಯಗಳಿಗೆ ಪಾಠಾಂತರಗಳನ್ನು ಕೊಡುವಲ್ಲಿ ವಹಿಸಿರುವ ಎಚ್ಚರ ಬಹುಶಃ ಪ್ರತಿಭಾಪೂರ್ಣವಾದುದು. ಡಿ.ಎಲ್.ಎನ್. ಅವರು ಕನ್ನಡ ಗ್ರಂಥಸಂಪಾದನೆಯಲ್ಲಿ ಶೈಕ್ಷಣಿಕ ಪಾಠವೊಂದನ್ನು ಪ್ರಶ್ನಿಸಿದ್ದಾರೆ. ಮತ್ತು ತೀ.ನಂ.ಶ್ರೀಯವರು ಒಪ್ಪಿಕೊಂಡಿದ್ದ ಆ ಪಾಠವನ್ನು ತಿದ್ದಿದ್ದಾರೆ. 'ಒಗಸೆರೆ' ಬೆಸುಗೆ ಎಂದರೆ ಎರಡಕ್ಕೂ ಬೊಗಸೆ ಎಂದೇ ಅರ್ಥ. ಇವೆರಡರಲ್ಲಿ ತೀ.ನಂ.ಶ್ರೀಯವರು

ಒಗಸೆಲೆಯನ್ನು ಒಪ್ಪಿ 'ಬೆಸುಗೆ' ಯನ್ನು ಪಾಠಾಂತರಕ್ಕೆ ತಳ್ಳಿದ್ದಾರೆ. ಬೆಸುಗೆ ಎನ್ನುವುದು ಕಠಿಣ ಪದವಾದುದರಿಂದ ಇದು ಸಮಸ್ಯೆಗೆ ಒಳಗಾಗುತ್ತದೆ.

ಉದಾ : ''ತುಳುಗೋಳೊಳ್..ಎಂಬ ಪದದ ಪಾಠವನ್ನು ನಿರ್ಣಯಿಸಿ ತುರುಗೊಳ್ಳಲ್ ಹಸ್ತಪ್ರತಿ ಪಾಠವನ್ನು ತುಗೊಳೊಳ್ ಎಂದು ಊಹೆ ಮಾಡಿ ತಿದ್ದಿರುವುದು ತೀ.ನಂ.ಶ್ರೀಯವರ ವೈಶಿಷ್ಟ್ಯವಾಗಿದೆ.''[೩]

ಈ ರೀತಿಯಾಗಿ ಪಾಠಾಂತರಕ್ಕೆ ಸಂಬಂಧಪಟ್ಟಂತೆ ಹಾಗೂ ಪಾಠ ಪರಿಷ್ಕರಣಕ್ಕೆ ಸಂಬಂಧಪಟ್ಟಂತೆ ತೀ.ನಂ.ಶ್ರೀಯವರು ಹಲವು ಸಮರ್ಥನೆಯ ಉತ್ತರಗಳನ್ನು ಕೊಟ್ಟು ಸ್ಪಷ್ಟಪಡಿಸಿದ್ದಾರೆ. ತೀ.ನಂ.ಶ್ರೀಯವರ ಈ ಸಾಧನೆ ಕನ್ನಡ ಗ್ರಂಥಸಂಪಾದನೆಯಲ್ಲಿ ಚಿರಸ್ಮರಣೀಯವಾದ ಅಧ್ಯಾಯವಾಗಿದೆ. ಅದರಲ್ಲೂ ಗ್ರಂಥಸಂಪಾದನೆ ಕ್ಷೇತ್ರದಲ್ಲಿ ಇವರ ಪ್ರತಿಭೆ ಅಮೂಲ್ಯವಾದುದು ಎಂದು ಹೇಳಬಹುದು. ನಂಬಿಯಣ್ಣನ ರಗಳೆ ಹಾಗೂ ಗದಾಯುದ್ಧ ಸಂಗ್ರಹಂ ಎಂಬ ಕೃತಿಗಳಿಗೆ ಸಂಬಂಧಪಟ್ಟಂತೆ ತೀ.ನಂ.ಶ್ರೀಯವರು ಮಾಡಿದ ಪಾಠಾಂತರಗಳು ಬಹಳ ಆಸಕ್ತಿದಾಯಕವಾದುದು ಎಂದು ಹೇಳಬಹುದು. ತೀ.ನಂ.ಶ್ರೀಯವರ ಈ ರೀತಿಯಾದ ವಿದ್ವತ್ ಅವರ ಸಂಪಾದನೆಯ ವೈಶಿಷ್ಟ್ಯವನ್ನು ಕುರಿತು ಹೇಳುತ್ತದೆ.

**೨. ಚಿಹ್ನೆಗಳ ಬಳಕೆ**

ತೀ.ನಂ.ಶ್ರೀಯವರ ಇನ್ನೊಂದು ರೀತಿಯ ವೈಶಿಷ್ಟ್ಯವೆಂದರೆ ಸೂಕ್ತಸ್ಥಲಗಳಲ್ಲಿ ಚಿಹ್ನೆಗಳ ಬಳಕೆ. ಅದು ಮುಖ್ಯವಾಗಿ ಗ್ರಂಥಪಾತವಾಗಿರುವ ಕಡೆ ಹಾಗೂ ಮೂಲ ಪಾಠವನ್ನು ತಿದ್ದುವುದು ಸಾಹಸವೆಂದು ತೋರಿದಾಗ ಅಂತಹ ಕಡೆ ಒಂದು ಶಬ್ಧರೂಪವನ್ನು ತೋರಿಸುವುದರ ಬಗ್ಗೆ ಇತ್ಯಾದಿ ಅಂಶಗಳನ್ನು ತೀ.ನಂ.ಶ್ರೀಯವರು ಆಧಾರವಾಗಿಟ್ಟುಕೊಂಡು ನಿರ್ದಿಷ್ಟ ಚಿಹ್ನೆಗಳನ್ನು ಗ್ರಂಥಸಂಪಾದನೆಯಲ್ಲಿ ಬಳಸಿಕೊಂಡಿದ್ದಾರೆ.

ತೀ.ನಂ.ಶ್ರೀಯವರು ಗದಾಯುದ್ಧ ಸಂಗ್ರಹಂ, ನಂಬಿಯಣ್ಣನ ರಗಳೆಗೆ ಸಂಬಂಧಪಟ್ಟಂತೆ ಕೆಲವು ನಿರ್ದಿಷ್ಟ ಚಿಹ್ನೆಗಳನ್ನು ಬಳಸಿದ್ದಾರೆ. ಅವುಗಳು ಈ ಕೆಳಗಿನಂತಿವೆ.

ನಂಬಿಯಣ್ಣನ ರಗಳೆಗೆ ಸಂಬಂಧಪಟ್ಟಂತೆ ಚಿಹ್ನೆಗಳನ್ನು ತೀ.ನಂ.ಶ್ರೀಯವರು ಈ ರೀತಿ ಕೊಟ್ಟಿದ್ದಾರೆ.

“(ಸ) ಸರ್ವತ್ರ : ಎಲ್ಲಾ ಮಾತೃಕೆಗಳಲ್ಲೂ ಇರುವ ಪಾಠ, ಮು.ಪಾ. ಮುಖ್ಯ ಪಾಠಾಂತರ

+ ಮಾತೃಕೆಗಳಲ್ಲಿ ದೊರೆಯುವ ಅಧಿಕ ಭಾಗವನ್ನು ಈ ಗುರುತಿನಿಂದ ತೋರಿಸಿದೆ

... ಪಾಠಾಂತರದಲ್ಲಿ ಈ ಗುರುತಿನಿಂದ ಸೂಚಿಸಿರುವ ಭಾಗವೂ ಅಂಗೀಕೃತ ಮೂಲಪಾಠಕ್ಕೆ ಸಮಾನವಾಗಿದೆಯೆಂದು ಅರ್ಥ.

.... ಪಾಠಾಂತರದಲ್ಲಿ ಈ ಗುರುತಿನಿಂದ ಸೂಚಿಸಿರುವ ಭಾಗವು ಅಂಗೀಕೃತ ಅದೇ ಅಡಿಟಿಪ್ಪಣಿಯಲ್ಲಿ ಇದಕ್ಕೆ ಹಿಂದೆ ಕೊಟ್ಟಿರುವ ಪಾಠಾಂತರದ ಭಾಗಕ್ಕೆ ಸಮನಾಗಿದೆಯೆಂದು ಅರ್ಥ..

× ಈ ಚಿಹ್ನೆ ಮಾತೃಕೆಯಲ್ಲಿ ಗ್ರಂಥಪಾತ ಮಾಡಿರುವುದನ್ನು ಸೂಚಿಸುತ್ತದೆ

<> ಎರಡು ಮಾತೃಕೆಗಳ ಪಾಠಾಂತರಗಳಿಗೆ ಬೇಧ ಅಲ್ಪವಾಗಿದ್ದರೆ ಪಾಠಾಂತರವನ್ನು ಒಂದೇ ಬಾರಿ ಕೊಟ್ಟು ಬೇಧವನ್ನು ಈ ಆವರಣದಲ್ಲಿ ತೋರಿಸಿದೆ

∴ ಎರಡು ಅಥವಾ ಹಲವು ಮಾತೃಕೆಗಳ ಪಾಠಾಂತರಗಳಿಗಿರುವ ಅಲ್ಪಬೇಧವನ್ನು ಗುರುತಿಸುವುದು ಅನಾವಶ್ಯಕವೆನಿಸಿದಾಗ ಪಾಠಾಂತರವನ್ನು ಒಂದೇ ಬಾರಿ ಕೊಟ್ಟು ಒಳಬೇಧವನ್ನು ಗಮನಿಸಿಲ್ಲವೆಂದು ತೋರಿಸಲು ಮಾತೃಕೆಗಳ ಸಂಜ್ಞೆಗಳ ನಡುವೆ ಈ ಚಿಹ್ನೆಯನ್ನು ಉಪಯೋಗಿಸಿದೆ.

[ ] ಯಾವುದೊಂದು ಮಾತೃಕೆಯೂ ಕವಿಯ ಪಾಠವನ್ನು ಸರಿಯಾಗಿಸಿ ಉಳಿಸಿಕೊಂಡಿಲ್ಲವೆಂದು ತೋರಿದ ಕಡೆ ಸಂಪಾದಕನು ಯಥಮತಿಯಾಗಿ ಸರಿಪಡಿಸಿದ ಮೂಲಪಾಠದ ಭಾಗವನ್ನು ಈ ಆವರಣ ಚಿಹ್ನೆಗಳಿಂದ ಗುರುತಿಸಿದೆ.

[ ]? ಯಾವುದೊಂದು ಮಾತೃಕೆಯ ಪಾಠವೂ ಸಮರ್ಪಕವೆನಿಸಿದ್ದರೂ ಮೂಲಪಾಠವನ್ನೇ ತಿದ್ದುವುದು ಸಾಹಸವೆಂದು ತೋರಿದಾಗ ಸಂಪಾದಕೀಯ ಸೂಚನೆಯನ್ನು ಅಡಿಟಿಪ್ಪಣಿಯಲ್ಲಿ ಈ ಚಿಹ್ನೆಗಳ ನಡುವೆ ಕೊಟ್ಟು ಮುಂದೆ ಪ್ರಶ್ನೆ ಚಿಹ್ನೆಯನ್ನು ಹಾಕಿದೆ.

? ಮಾತೃಕೆಯಲ್ಲಿ ಹುಳು ಕೊರೆಯುವುದೇ ಮೊದಲಾದ ಕಾರಣಗಳಿಂದ ಯಾವುದಾದರೂ ಅಕ್ಷರ ಇಂಥದೇ ಎಂದು ಖಚಿತವಾಗಿ ನಿರ್ಣಯಿಸಲು ಸಾಧ್ಯವಾಗದ ಕಡೆ ತಿಳಿದ ರೀತಿಯಲ್ಲಿ ಅದನ್ನು ಓದಿ ಸಂದೇಹವುಂಟೆಂದು ತೋರಿಸಲು ಆ ಅಕ್ಷರದ ಮುಂದೆ ಈ ಚಿಹ್ನೆಯನ್ನು ಕೊಟ್ಟಿದೆ.[೪]

ತೀ.ನಂ.ಶ್ರೀಯವರು ನಂಬಿಯಣ್ಣನ ರಗಳೆಗೆ ಸಂಬಂಧಪಟ್ಟಂತೆ ಈ ಮೇಲಿನ ರೀತಿಯದ ಚಿಹ್ನೆಗಳನ್ನು ಬಳಸಿದ್ದಾರೆ. '' ಆದರೆ ನಂಬಿಯಣ್ಣನ ರಗಳೆಯಲ್ಲಿ ಕೆಲವೊಮ್ಮೆ ಕೆಲವು ಚಿಹ್ನೆಗಳು ಗದಾಯುದ್ಧ ಸಂಗ್ರಹಂ ಕೃತಿಯಲ್ಲಿ ತೀ.ನಂ.ಶ್ರೀಯವರು ಬಳಸಲಿಲ್ಲ. ಬದಲಾಗಿ ಇದಕ್ಕೆ ಕೆಲವು ಭಿನ್ನ ರೀತಿಯಾದ ಚಿಹ್ನೆಗಳನ್ನು ಬಳಸಿದ್ದಾರೆ.''[೫] ಗದಾಯುದ್ಧ ಸಂಗ್ರಹಂ ಕೃತಿಯಲ್ಲಿ ಬಳಕೆಯಾಗಿರುವ ಚಿಹ್ನೆಗಳು.

'' (ಸ) ಸರ್ವತ್ರ' ಎಲ್ಲಾ ಮಾತೃಕೆಗಳ ಪಾಠ

ಸ್ವೀಪಾ = ಈ ಸಂಪಾದಕನು-ಸ್ವೀಕರಿಸುವ ಪಾಠ ಇಂಥ ಮಾತೃಕೆಯದು ಎಂಬುದನ್ನು ಇದು ತೋರಿಸುತ್ತದೆ.

[ ] ಮೂಲ ಹೀಗಿರಬಹುದೆಂದು ಈ ಸಂಪಾದಕನು ಯಥಾಮತಿಯಾಗಿ ಊಹಿಸಿದ ಪಾಠವನ್ನು ಈ ಚಿಹ್ನೆಯೊಳಗೆ ಕೊಟ್ಟಿದೆ. ಕಾವ್ಯ ಸಂಗ್ರಹ ಮಾಡುವಾಗ ವಾಕ್ಯಗಳನ್ನು ಹೊಂದಿಸಿಕೊಳ್ಳಲು ಅವಶ್ಯಕವಾದ ಮಾರ್ಪಾಡುಗಳನ್ನು ಚಿಹ್ನೆಯೊಳಗೆ ತೋರಿಸಿದೆ.

? ಮೂಲಪಾಠವನ್ನು ತಿದ್ದುವುದು ಸಾಹಸವೆಂದು ತೋರಿದಾಗ ಸಂಪಾದಕೀಯ ಸೂಚನೆಯನ್ನು ಅಡಿಟಿಪ್ಪಣಿಯಲ್ಲಿ ಈ ರೀತಿ ತೋರಿಸಿದೆ.

(?) ಅರ್ಥ ಮೊದಲಾದವುಗಳಲ್ಲಿ ಸಂದೇಹವುಂಟೆಂದು ತೋರಿದಾಗ ಟಿಪ್ಪಣಿಗಳಲ್ಲಿ ಈ ಚಿಹ್ನೆಯನ್ನು ಉಪಯೋಗಿಸಿದೆ.

.XXX ಮಾತೃಕೆಗಳಲ್ಲಿ ಗ್ರಂಥ ಪಾಠವಾಗಿರುವುದನ್ನು ತೋರಿಸುವ ಚಿಹ್ನೆ.

... ಅಡಿಟಿಪ್ಪಣಿಯಲ್ಲಿ ಬರುವ ಪಾಠಾಂತರಗಳಲ್ಲಿ ಹೀಗೆ ತೋರಿಸಿದ ಭಾಗವು ಇದರ ಹಿಂದೆ ಕೊಟ್ಟಿರುವ ಪಾಠಾಂತರದ ಭಾಗಕ್ಕೆ ಸಮನಾಗಿದೆಯೆಂದು ಅರ್ಥ.

> ಒಂದು ಶಬ್ಧರೂಪದಿಂದ ಇನ್ನೊಂದು ಶಬ್ಧರೂಪವು ಬಂದಿದೆಯೆಂದು ತೋರಿಸಿದ ಚಿಹ್ನೆ.

< ಒಂದು ಶಬ್ಧರೂಪಕ್ಕೆ ಇನ್ನೊಂದು ಶಬ್ಧರೂಪವು ಮೂಲವೆಂದು ತೋರಿಸುವ ಚಿಹ್ನೆ.

- ಸಮಾಸದ ಒಂದು ಭಾಗವನ್ನು ಪ್ರತ್ಯೇಕಿಸಿ ಟಿಪ್ಪಣಿಗಳಲ್ಲಿ ಉದ್ಧರಿಸಿದೆ ಎಂದು ತೋರಿಸುವ ಚಿಹ್ನೆ.''[೬]

ಈ ರೀತಿಯಾದ ಚಿಹ್ನೆಗಳನ್ನು ತೀ.ನಂ.ಶ್ರೀಯವರು ತಮ್ಮ ಗ್ರಂಥಸಂಪಾದನ ಶಾಸ್ತ್ರದಲ್ಲಿ ಬಳಕೆಗೆ ತಂದಿದ್ದಾರೆ. ಏನೆಂದರೆ ತೀ.ನಂ.ಶ್ರೀಯವರೇ ಈ ಚಿಹ್ನೆಗಳನ್ನು ತೋರುವವರಲ್ಲಿ ಮೊದಲಿಗರು ಎಂದು ಹೇಳಬಹುದು. ಏಕೆಂದರೆ ಅನೇಕ ಚಿಹ್ನೆಗಳನ್ನು ತೀ.ನಂ.ಶ್ರೀಯವರು ಒಂದು ನಿರ್ದಿಷ್ಟ ವ್ಯವಸ್ಥೆಯಲ್ಲಿ ಬಳಸಿಕೊಂಡಿದ್ದಾರೆ.

'' ಈ ರೀತಿಯಾದ ಚಿಹ್ನೆಗಳನ್ನು ತೀ.ನಂ.ಶ್ರೀಯವರು ವೈವಿಧ್ಯರೀತಿಯ ಚಿಹ್ನೆಗಳ ಮೂಲಕ ಪ್ರಯೋಗ ಮಾಡಿದ್ದಾರೆ. ತೀ.ನಂ.ಶ್ರೀಯವರ ಈ ಪ್ರತಿಭೆ ಬಹಳ ಅಮೂಲ್ಯವಾದುದು ಎಂದು ಹೇಳಬಹುದಾಗಿದೆ.''[೭] ಈ ಚಿಹ್ನೆಗಳ ಬಳಕೆಯು ಪ್ರಾಚೀನ ಕಾಲದಿಂದ ಇತ್ತೇನೋ ಗೊತ್ತಿಲ್ಲ ಅಂದರೆ ತೀ.ನಂ.ಶ್ರೀಯವರು ಇದನ್ನು ಮೊದಲಬಾರಿಗೆ ಪ್ರಯೋಗಕ್ಕೆ ತಂದರು. ಈ ಚಿಹ್ನೆಗಳ ಬಳಕೆ ತೀ.ನಂ.ಶ್ರೀಯವರ ಗ್ರಂಥಸಂಪಾದನೆಯ ವೈಶಿಷ್ಟ್ಯವಾಗಿದೆ.

**೩. ಸಂಪಾದನೆಯ ವಿವರ**

ತೀ.ನಂ.ಶ್ರೀಯವರು ಸಂಪಾದಿಸಿರುವ ಎರಡು ಪ್ರಾಚೀನ ಕೃತಿಗಳು ಯಾವುದೆಂದರೆ 'ನಂಬಿಯಣ್ಣನ ರಗಳೆ'ಗದಾಯುದ್ಧ ಸಂಗ್ರಹಂ'' ಈ ಕೃತಿಗಳನ್ನು ಸಂಪಾದಿಸಲು ತೀ.ನಂ.ಶ್ರೀಯವರು ಅನುಸರಿಸಿರುವ ಕ್ರಮವನ್ನು ಈ ಕೆಳಕಂಡಂತೆ ಕಾಣಬಹುದಾಗಿದೆ. ಮೊದಲನೆಯದಾಗಿ ನಂಬಿಯಣ್ಣನ ರಗಳೆಗೆ ಸಂಬಂಧಪಟ್ಟಂತೆ ಹಸ್ತಪ್ರತಿಗಳ ಹುಡುಕಾಟ, ಪಾಠಾಂತರ ಸಂಕಲನ, ಇತ್ಯಾದಿ ರೀತಿಯಾಗಿ ಆ ಹಸ್ತಪ್ರತಿಗಳನ್ನು ಪರಿಶೀಲಿಸುವುದು ಎಂದಾಗುತ್ತದೆ. ನಂಬಿಯಣ್ಣನ ರಗಳೆಗೆ ಸಂಬಂಧಪಟ್ಟಂತೆ ತೀ.ನಂ.ಶ್ರೀಯವರ ಕಾರ್ಯ ವೈಖರಿ ಈ ರೀತಿ ಇದೆ.

ನಂಬಿಯಣ್ಣನ ರಗಳೆಗೆ ಸಂಬಂಧಿಸಿದಂತೆ ತೀ.ನಂ.ಶ್ರೀಯವರು ಉಪಯೋಗಿಸಿಕೊಂಡಿರುವ ಹಸ್ತಪ್ರತಿಗಳ ವಿವರ ಈ ಕೆಳಗಿನಂತೆ ಇವೆ. ಒಟ್ಟು ಹಸ್ತಪ್ರತಿಗಳ ಸಂಖ್ಯೆ ಐದು (ಕ, ಖ, ಗ, ಚ, ಜ)

ಕ: ಹಸ್ತಪ್ರತಿ: ಇದನ್ನು ಮೈಸೂರು ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿಯ ಕೆ ೩೫೮ ಸಂಖ್ಯೆಯ 'ಶರಣರ ರಗಳೆ'ಎಂಬ ಹೆಸರುಳ್ಳ ಓಲೆಗರಿಯ ಪುಸ್ತಕದಲ್ಲಿ ದೊರೆಯುವ ಪಾಠ. ಈ ಪುಸ್ತಕದಲ್ಲಿ ಹರಿಹರ ರಚಿಸಿದ ರಗಳೆಗಳು ನೂರಕ್ಕೂ ಹೆಚ್ಚಾಗಿದೆ. ಇದು ಕವಿಪಾಠಕ್ಕೆ ಹತ್ತಿರವಾಗಿರುವ ಹಸ್ತಪ್ರತಿ ಎಂದು ಹೇಳಬಹುದು.

ಖ : ಈ ಹಸ್ತಪ್ರತಿಯನ್ನು ಮೈಸೂರು ಗೌರ್ನವೆಂಟ್ ಓರಿಯಂಟಲ್ ಲೈಬ್ರರಿಯ KA 62 ಸಂಖ್ಯೆಯ ನಂಬಿಯಣ್ಣನ ರಗಳೆ ಎಂಬ ಹೆಸರುಳ್ಳ ಫೂಲ್ಸ್ ಕ್ಯಾಪ್ ಆಕಾರದ ಕಾಗದದ ಪುಸ್ತಕದಲ್ಲಿ ದೊರೆಯುವ ಪಾಠ.

ಗ : ಇದನ್ನು ಮೈಸೂರು ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿಯ KA/44 ಸಂಖ್ಯೆಯ ವೂಲ್ಸ್‌ಕ್ಯಾಪ್ ಆಕಾರದ ಕಾಗದದ ಪುಸ್ತಕದಲ್ಲಿ ದೊರೆಯುವ ಪಾಠ. ಈ ಗ್ರಂಥವೂ ರಗಳೆಗಳ ಒಂದು ಸಂಕಲನ ಇದಕ್ಕೆ ಅರವತ್ತು ಮೂರು ಪುರಾತನರ ಚರಿತ್ರೆ ಶೈವ ಪುರಾಣ ಎಂದು ಮುಖಪತ್ರದಲ್ಲಿ ಹೆಸರು ಕೊಟ್ಟಿದ್ದಾರೆ.

ಚ: ಮದರಾಸಿನ ಗೌರ್ನ್‌ಮೆಂಟ್ ಓರಿಯೆಂಟಲ್ ಮ್ಯಾನುಸ್ಕ್ರಿಪ್ಟ್ ಲೈಬ್ರರಿಯಲ್ಲಿ ೧೮-೫-೨೦ ಎಂಬ ಸಂಖ್ಯೆಯನ್ನು ಕೊಟ್ಟಿರುವ ಓಲೆಯಗರಿಯ ಪುಸ್ತಕದಲ್ಲಿ ದೊರೆಯುವ ಪಾಠ. ಈ ಪುಸ್ತಕದಲ್ಲಿ ಸೌಂದರ್ಯ ಪುರಾಣವೂ, ಏಳು ರಗಳೆಗಳು ಉಂಟು. ಇದರಲ್ಲಿ ಹಲವು ಓಲೆಗಳು ನಾಶವಾಗಿರುವುದನ್ನು ತೀ.ನಂ.ಶ್ರೀಯವರು ತಿಳಿಸಿದ್ದಾರೆ.

ಜ : ಪ್ರತಿ ಇದನ್ನು ಮೈಸೂರಿನ ಓರಿಯಂಟಲ್ ಲೈಬ್ರರಿಯಲ್ಲಿ ಶ್ರೀಮಾನ್ ಎಂ.ಡಿ. ನರಸಿಂಹಪ್ಪನವರ ವಿಶ್ವಾಸ ಪೂರ್ವಕವಾಗಿ ತೀ.ನಂ.ಶ್ರೀಯವರಿಗೆ ಕೊಟ್ಟ ಓಲೆಗರಿಯ ಪುಸ್ತಕದಲ್ಲಿ ದೊರೆಯುವ ಪಾಠ. ಇದರಲ್ಲಿ ನಂಬಿಯಣ್ಣನ ರಗಳೆ ಮಾತ್ರವಲ್ಲದೆ ಕೊಟ್ಟ ಸಂಪಾದನೆ ಚೆನ್ನಬಸವೇಶ್ವರ ವಚನ ಮೊದಲಾದವು ಇವೆ ಎಂದು ತೀ.ನಂ.ಶ್ರೀಯವರು ತಿಳಿಸುತ್ತಾರೆ.

ಈ ಮೇಲಿನ ಮಾತೃಕೆಗಳಲ್ಲಿ ಕ, ಚ, ಜ' ಈ ಮೂರರಲ್ಲಿ 'ಱ'ಕಾರವು ಸಾಮಾನ್ಯವಾಗಿ ತಪ್ಪಿಲ್ಲದೆ ಪ್ರಯೋಗವಾಗಿದೆ. 'ಖ'ದಲ್ಲಿ ' ಱ' ಕಾರವುಂಟು. ಇದು ಕೆಲವು

ವೇಳೆ ತಪ್ಪಾಗಿರವುದನ್ನು ಕಂಡದ್ದು ಉಂಟು. ಎಂದು 'ಗ' ದಲ್ಲಿ ' ಱ' ಕಾರವನ್ನು ಬಳಸಲಿಲ್ಲವೆಂದು ತೀ.ನಂ.ಶ್ರೀಯವರು ತಿಳಿಸುತ್ತಾರೆ.

"ಈ ಹಸ್ತಪ್ರತಿಗಳಲ್ಲಿ 'ಕ' 'ಜ'ಗಳ ಪಾಠ ಸಂಪ್ರದಾಯವೂ 'ಖ, ಗ, ಚ'ಗಳ ಪಾಠ ಸಂಪ್ರದಾಯವೂ ಕೆಲಮಟ್ಟಿಗೆ ಭಿನ್ನವಾಗಿದೆ ಎಂದು 'ಕ' ಜ'ಗಳ ಸಂಪ್ರದಾಯವೇ ಮೂಲಕ್ಕೆ ಹತ್ತಿರವೆಂದು ಪರಿಶೀಲನೆಮಾಡಿ" ತೀ.ನಂ.ಶ್ರೀಯವರು ಈ ಮೇಲಿನ ಮಾತನ್ನು ಹೇಳುತ್ತಾರೆ.

'ಖ, ಗ, ಚ' ಗುಂಪಿನಲ್ಲಿ 'ಖ, ಗ'ಗಳು ಒಂದಕ್ಕೊಂದು ಬಲುಮಟ್ಟಿಗೆ ಹೊಂದಿಕೊಳ್ಳುತ್ತದೆ. 'ಚ' ವೇ ಬೇರೆ ನಿಲ್ಲುತ್ತದೆ. 'ಖ' 'ಗ' ಗಳಲ್ಲಿ ಅನೇಕ ಪ್ರಕ್ಷಿಪ್ತ ಭಾಗಗಳುಂಟು. ಅನೇಕ ತಿದ್ದುಪಡಿಗಳು ಉಂಟು ಎಂದು ಅದೇ ರೀತಿ 'ಚ'ದಲ್ಲಂತೂ ಇವು ಮಿತಿಮೀರಿ ಹೋಗಿವೆ ಎಂದು ತೀ.ನಂ.ಶ್ರೀಯವರು ತಿಳಿಸುತ್ತಾರೆ. ಈ ಮೇಲಿನ ಐದು ಮಾತೃಕೆಗಳಲ್ಲಿ ಯಾವುದು ಒಂದು ಇನ್ನೊಂದರ ನಕಲಾಗಿಲ್ಲ ಎಂದು ತೀ.ನಂ.ಶ್ರೀಯವರು ವ್ಯಕ್ತಪಡಿಸುತ್ತಾರೆ.

ಹಸ್ತಪ್ರತಿಗಳಗೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ಕ್ರಮವಾಗಿಯೂ ನಿರೂಪಿಸಿದ ಮೇಲೆ ಸಂಪಾದಕನು ಪ್ರಕೃತ ಗ್ರಂಥಕ್ಕೆ ಸಂಬಂಧಿಸಿದ ಎಲ್ಲಾ ವಿಚಾರಗಳನ್ನು ತನ್ನ ಗ್ರಂಥದಲ್ಲಿ ಪ್ರತಿಪಾದನೆ ಮಾಡಬೇಕಾಗುತ್ತದೆ. ಇದರಲ್ಲಿ ಮುಖ್ಯವಾಗಿ ಸಂಪಾದಕನ ಕಾಲ, ದೇಶ, ಆ ಕವಿಯ ಇತರ ಗ್ರಂಥಗಳು ಜೀವನ ಚರಿತ್ರೆ ಗ್ರಂಥದ ವಿಷಯ ಆತನು ಬರೆದು ಕಾವ್ಯದ ಸಾರಾಂಶ, ವಸ್ತುವಿನ ಮೂಲ, ಮಾಡಿಕೊಂಡಿರುವ ಮಾರ್ಪಾಡುಗಳು ಮತ್ತು ಅವುಗಳ ಪರಿಣಾಮ, ಭಾಗ, ರಚನೆ, ವರ್ಣನೆ ಮುಂತಾದವುಗಳನ್ನು ಒಳಗೊಂಡಿರುತ್ತದೆ. ಒಂದು ಸಂಪಾದಿತ ಕೃತಿ ಇಷ್ಟೆಲ್ಲಾ ಮಾಹಿತಿಯನ್ನು ಕೊಡುತ್ತದೆ. ಈ ರೀತಿಯಾಗಿ ಒಂದು ಸಂಪಾದಕನ ಕಾರ್ಯವನ್ನುವುದು ಆಕೃತಿ ವಿಷಯಕ್ಕೆ ಸೀಮಿತವಾಗಿರದೆ ಅದರ ಕಾಲ, ಅದರ ವೃತ್ತಿ ಇತ್ಯಾದಿ ವಿಷಯಗಳನ್ನು ಒಳಗೊಂಡಿರುತ್ತದೆ. ಅದೇ ರೀತಿ ತೀ.ನಂ.ಶ್ರಿಯವರು ಸಂಪಾದಿಸಿರುವ ನಂಬಿಯಣ್ಣನ ರಗಳೆಯು ಕೂಡ ಹರಿಹರನ ಬಗ್ಗೆ ಹಾಗೂ ಅವನ ಕಾಲದ ಬಗ್ಗೆ ಚರ್ಚೆ ಮಾಡುತ್ತದೆ.

**ಪಾಠಾಂತರಗಳ ಸಂಕಲನ**

ಪಾಠಾಂತರ ಸಂಕಲನವನ್ನು ಮಾಡುವಾಗ ಒಂದನ್ನು ಬಿಡದ ಹಾಗೆ ಎಲ್ಲವನ್ನೂ ಗುರುತುಹಾಕಿಕೊಳ್ಳಬೇಕಾಗುತ್ತದೆ. ಹೀಗೆ ಎಲ್ಲಾ ಪ್ರತಿಗಳ ಪಾಠಾಂತರಗಳನ್ನು ಒಂದು ಪ್ರತಿಯಲ್ಲಿ ಒಟ್ಟಾಗಿ ಕೂಡಿಸುವುದಕ್ಕೆ ಪಾಠಾಂತರ ಸಂಕಲನವೆಂದು ಕರೆಯುತ್ತಾರೆ. ಇದು

ಎಚ್ಚರಿಕೆಯಿಂದಲೂ, ತಾಳ್ಮೆಯಿಂದಲೂ ನಡೆಯಬೇಕಾದರೆ ಕೆಲಸ ಮುಂದಿನ ಸಂಪಾದನೆಗಳಿಗೆ ಇದು ತಳಪಾಯ.

ಉತ್ತಮವೆಂದು ಕಂಡುಬಂದ ಪ್ರತಿಯನ್ನು ಅಥವಾ ಅದರ ಪಾಠವನ್ನು ಆಧಾರವಾಗಿರಿಸಿಕೊಂಡು ಅದರೊಡನೆ ಇತರ ಪ್ರತಿಗಳ ಪಾಠವನ್ನು ಹೋಲಿಸಿ ನೋಡಿ ಪಾಠಾಂತರಗಳನ್ನು ಬರೆದುಕೊಳ್ಳಬೇಕಾಗುತ್ತದೆ.

" ಉದಾ : ನಾಲ್ಕು ಪ್ರತಿಗಳು ಕ, ಖ, ಗ, ಚ
ಈ ನಾಲ್ಕು ಪ್ರತಿಗಳಲ್ಲಿ ಕಂಡುಬರುವ ದೋಷಗಳು
ಎನಗೆ, ಯೆನಗೆ, ಎನಗೆ, ಯೆನಗಿ, ಇತ್ಯಾದಿ"[6]

ಒಂದು ಪ್ರತಿಗೂ ಹಾಗೂ ಇನ್ನೊಂದು ಪ್ರತಿಯ ನಡುವೆ ಇರುವ ವ್ಯತ್ಯಾಸವಾಗಿದೆ. ಈ ವ್ಯತ್ಯಾಸವನ್ನು ತೀ.ನಂ.ಶ್ರೀಯವರು ಗುರುತಿಸಿ ಅದಕ್ಕೆ ತಕ್ಕ ಉತ್ತರವನ್ನು ಬಳಸಿದ್ದಾರೆ.

**ಪಾಠಾಂತರ ಚಿಹ್ನೆಗಳು**

ತೀ.ನಂ.ಶ್ರೀಯವರು ನಂಬಿಯಣ್ಣನ ರಗಳೆಯಲ್ಲಿ ಬಳಸಿರುವ ಮುಖ್ಯ ಅಂಶವೆಂದರೆ ನಿರ್ದಿಷ್ಟ ಚಿಹ್ನೆಗಳ ಬಳಕೆ. ಈ ಚಿಹ್ನೆಗಳು ಗ್ರಂಥಪಾತವಾಗಿರುವ ಕಡೆ ಲೋಪವಾಗಿರುವ ಭಾಗದಲ್ಲಿ ಹೆಚ್ಚಿನದಾಗಿ ಬಳಸಿದ್ದಾರೆ. ಪಾಶ್ಚಾತ್ಯ ವಿದ್ವಾಂಸಕರು, ಈ ಚಿಹ್ನೆಗಳನ್ನು ಮೊದಲು ಬಳಸಿದರು. ತದನಂತರ ಈ ಚಿಹ್ನೆಗಳನ್ನು ಕನ್ನಡದಲ್ಲಿ ತೀ.ನಂ.ಶ್ರೀಯವರು ಮೊಟ್ಟಮೊದಲಬಾರಿಗೆ ಬಳಸಿದರು. ಚಿಹ್ನೆಗಳು ಉದಾ :

1. + ಮಾತೃಕೆಗಳಲ್ಲಿ ದೊರೆಯುವ ಅಧಿಕ ಭಾಗ
2. ಮೂಲ ಪಾಠಕ್ಕೆ ಸಮಾನವಾಗಿದೆಯೆಂದು ಈ ರೀತಯ ಚಿಹ್ನೆಗಳ ಮೂಲಕ ತೋರಿಸುತ್ತಾರೆ.

**ಪಾಠ ನಿರ್ಣಯ**

ಕೊನೆಯದಾಗಿ ಸಂಪಾದನೆಯಲ್ಲಿ ತೀ.ನಂ.ಶ್ರೀಯವರು ಈ ಹಂತವನ್ನು ಬಳಸುತ್ತಾರೆ. ಯಾವ ಮಾತೃಕೆಯ ಪಾಠ ಕವಿಯ ಪಾಠಕ್ಕೆ ಹತ್ತಿರವಾಗುತ್ತದೆಂದು ನಿರ್ಧರಿಸಬೇಕಾಗುತ್ತದೆ. ಉತ್ತಮವಾದ ಪಾಠವನ್ನು ಆಯ್ದುಕೊಳ್ಳಬೇಕಾಗುತ್ತದೆ.

ಉದಾ : ನಂಬಿಯಣ್ಣನ ರಗಳೆಗೆ ಸಂಬಂಧಪಟ್ಟಂತೆ

'ಕ' ಹಸ್ತಪ್ರತಿ ಕವಿಯ ಪಾಠಕ್ಕೆ ಹತ್ತಿರವೆಂದು ತೀ.ನಂ.ಶ್ರೀಯವರು ತಿಳಿಸಿದ್ದಾರೆ.

'ಕ' ಪ್ರತಿಗೆ ಅನುಗುಣವಾಗಿ ಅಥವಾ ಸಹಾಯವಾಗಿ ಮಿಕ್ಕ ನಾಲ್ಕು ಪ್ರತಿಗಳಾದ 'ಖ, ಗ, ಚ, ಜ' 'ಕ' ಪ್ರತಿಗೆ ಸಹಾಯವಾಗಿ ಇಟ್ಟುಕೊಳ್ಳಬೇಕು. ಇದನ್ನು ತೀ.ನಂ.ಶ್ರೀಯವರು ಅನುಸರಿಸಿದ್ದಾರೆ. ಕೊನೆಗೆ ತೀ.ನಂ.ಶ್ರೀಯವರು 'ಕ'ಪ್ರತಿಯು ಮೂಲ ಪ್ರತಿ ಎಂದು ನಿಶ್ಚಯಿಸಿದರು.

ಅದೇ ರೀತಿಯಾಗಿ ತೀ.ನಂ.ಶ್ರೀಯವರು 'ಗದಾಯುದ್ಧ ಸಂಗ್ರಹಂ' ಕಾವ್ಯಕ್ಕೆ ಸಂಬಂಧಪಟ್ಟ ಸಂಪಾದನೆಯನ್ನು ಮಾಡಿದ್ದಾರೆ. ಇದರ ಸಂಪಾದನೆಯ ವಿವರ ಈ ಕೆಳಕಂಡಂತಿದೆ.

ಗದಾಯುದ್ಧದ ಕಾವ್ಯವನ್ನು ಸಂಪಾದಿಸಬೇಕಾದರೆ ತೀ.ನಂ.ಶ್ರೀಯವರು ಹಲವಾರು ಪುಸ್ತಕಗಳನ್ನು ಅಂದರೆ ಈ ಕೃತಿಗೆ ಸಂಬಂಧಪಡುವ ಹಾಗೂ ಹತ್ತಿರವಾಗಿರುವ ಕೆಲವು ಗ್ರಂಥಗಳನ್ನು ಗಮನಿಸಿದ್ದಾರೆ. 'ಗದಾಯುದ್ಧ ಸಂಗ್ರಹಂ' ಎಂಬ ಹೊಸ ಕೃತಿಯನ್ನು ನೋಡಿದವರಿಗೆ ಇದು ಆಗಲೇ ಸಂಪಾದಿತ ಕೃತಿಯೊಂದರ ಕೆಲವು ಭಾಗಗಳನ್ನು ತೆಗೆದುಕೊಳ್ಳುವುದೇ 'ಸಂಗ್ರಹ'ವೆನಿಸಿಕೊಳ್ಳುತ್ತದೆ. ಇದನ್ನು ತೀ.ನಂ.ಶ್ರೀಯವರು ಮಾಡಿದ್ದಾರೆ. ತೀ.ನಂ.ಶ್ರೀಯವರು 'ಗದಾಯುದ್ಧ ಸಂಗ್ರಹಂ' ಕೃತಿಯನ್ನು ಹೊರತರಬೇಕಾದರೆ ಅದಕ್ಕೆ ಅನುಗುಣವಾದ ಕೆಲವು ಆಕರಗಳನ್ನು ಮೊದಲು ಸಂಗ್ರಹಿಸಿಕೊಂಡರು. ಇದರಲ್ಲಿ ಮುಖ್ಯವಾಗಿ ಈ ಕೆಳಕಂಡಂತೆ ಇವೆ.

ಎಂ.ಎ. ರಾಮಾನುಜಯ್ಯಾಂಗಾರರು ಸಂಪಾದಿಸಿದ್ದ 'ಗದಾಯುದ್ಧವು' ತೀ.ನಂ.ಶ್ರೀಯವರ ಕೃತಿಗೆ ಪ್ರೇರಣೆಯಾಯಿತು. ಅದೇ ರೀತಿ ಈ ಕೃತಿಯನ್ನಲ್ಲದೆ ರಾಮಾನುಜಯ್ಯಂಗಾರ್ಯರು ಬಳಸಿಕೊಂಡಿದ್ದ ಹಸ್ತಪ್ರತಿಗಳನ್ನಲ್ಲದೆ ರನ್ನನ ಪದ್ಯಗಳು ಉಲ್ಲೇಖಗೊಂಡಿರುವ ಹಿಂದಿನ ಕಾವ್ಯ ಸಂಕಲನಗಳು ಬಿ.ಎಂ.ಶ್ರೀಯವರ 'ಗದಾಯುದ್ಧ ನಾಟಕ' ವನ್ನು ಕೆಲವು ಸಂಸ್ಕೃತ ಆಕರಗಳನ್ನು ತಮ್ಮ ಸಂಪಾದನ ಸಾಮಗ್ರಿಯ ವ್ಯಾಪ್ತಿಗೆ ತಂದುಕೊಂಡಿದ್ದಾರೆ.

ಇದರ ಜೊತೆಗೆ ''ಮೈಸೂರಿನ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ನಲ್ಲಿರುವ ಗದಾಯುದ್ಧ ಕಾವ್ಯದ ಕೈ ಬರಹದ ಕಾಗದದ ಹಸ್ತಪ್ರತಿ ಚೆನ್ನೈಯಲ್ಲಿರುವ ಓರಿಯಂಟಲ್ ಮ್ಯಾನಸ್ಕ್ರಿಪ್ಟ್ ಲೈಬ್ರರಿಯಲ್ಲಿರುವ ಗದಾಯುದ್ಧದ ಅತ್ಯುತ್ತಮವಾದ ಓಲೆಗರಿಯ ಪ್ರತಿಯ ನಕಲು. ಸಂಸ್ಕೃತ ಮಹಾಭಾರತ, ಪುಣೆಯ ಭಂಡಾರ್‌ಕರ್ ಸಂಸ್ಥೆಯ ಪರಿಷ್ಕರಣ, ಭಟ್ಟನಾರಾಯಣನ ವೇಣಿಸಂಹಾರ, ಕೇಶಿರಾಜನ ಶಬ್ದಮಣಿದರ್ಪಣ, ಭಟ್ಟಕಳಾಂಕನ, ಶಬ್ದನುಶಾಸನ, ಪೊನ್ನನ ಶಾಂತಿಪುರಾಣ, ಈ ಎಲ್ಲಾ ಮಾತೃಕೆಗಳ

ಪಾಠವನ್ನು ಆರಿಸಿಕೊಂಡಿರುವುದಾಗಿ ಇದರಲ್ಲಿ 'ಗದಾಯುದ್ಧಕ್ಕೆ' ಹತ್ತಿರವಾದ ಪಾಠವನ್ನು ನಿಶ್ಚಯಿಸಿ ಅದಕ್ಕೆ ಸಂಬಂಧಪಟ್ಟ ಟಿಪ್ಪಣಿಗಳನ್ನು ಆಯ್ಕೆ ಮಾಡಿ ಈ ಕೃತಿಯನ್ನು ಸಂಗ್ರಹಿಸಿರುವುದಾಗಿ"[೧೦] ತೀ.ನಂ.ಶ್ರೀಯವರು ತಿಳಿಸುತ್ತಾರೆ.

ಈ ಕೃತಿಗೆ ಸಂಬಂಧಪಟ್ಟಂತೆ ಹಸ್ತಪ್ರತಿಗಳ ಸಂಗ್ರಹಣ ಪಾಠಾಂತರ ಸಂಕಲನ ಚಿಹ್ನೆಗಳ ಬಳಕೆ, ಪಾಠನಿರ್ಣಯ, ಈ ನಾಲ್ಕು ಹಂತಗಳಲ್ಲಿ ಈಕೃತಿಯನ್ನು ಸಂಪಾದಿಸಿರುವುದು ನಮಗೆ ಕಂಡುಬರುತ್ತದೆ. ಗದಾಯುದ್ಧಕ್ಕೆ ಬಳಸಿಕೊಂಡಿರುವ ಪ್ರತಿಗಳೇ ಬೇರೆ ಎಂದು ಹೇಳಬಹುದು. ಹಾಗೂ ಚಿಹ್ನೆಗಳಲ್ಲಿ ಕೆಲವು ಬದಲಾವಣೆಗಳು ಇರುವುದನ್ನು ಕಾಣಬಹುದಾಗಿದೆ. ಈ ಕೃತಿಗೆ ಸಂಬಂಧಪಟ್ಟಂತೆ ತೀ.ನಂ.ಶ್ರೀಯವರು ಸಿದ್ಧಪಡಿಸಿರುವ ಟಿಪ್ಪಣಿಗಳಂತೂ ವಿದ್ವತ್‌ಪುಳ್ಳದಾಗಿದೆ. ಹಾಗೂ ಸಂಶೋಧನಾ ಲೇಖನಗಳು ಈ ರೀತಿ ಇವೆ ಎಂಬುದು ನಮಗೆ ಗೊತ್ತಾಗುತ್ತದೆ. ಒಟ್ಟಾರೆ ಹೇಳುವುದಾದರೆ ತೀ.ನಂ.ಶ್ರೀಯವರ ಗ್ರಂಥಸಂಪಾದನೆಯ ರೀತಿ ವೈವಿಧ್ಯಮಯವಾದುದು ಎಂದು ಹೇಳಬಹುದು.

## ಅಡಿಟಿಪ್ಪಣಿಗಳು

| | | | |
|---|---|---|---|
| ೧. | ಡಾ. ದೇ.ಜ.ಗೌ | : | 'ಶ್ರೀಕಂಠದರ್ಶನ' ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಪುಸಂ. ೩೪, ಮೈಸೂರು ೩೪. |
| ೨. | ಡಾ. ಎಂ. ಚಿದಾನಂದಮೂರ್ತಿ | : | 'ಶ್ರೀಕಂಠತೀರ್ಥ' ಐ.ಬಿ.ಎಚ್.ಪ್ರಕಾಶನ, ಪು.ಸಂ. ೧೮೯, ಬೆಂಗಳೂರು - ೧೯೭೬ |
| ೩. | ಡಾ. ಡಿ.ಎಲ್.ಎನ್ | : | 'ಕನ್ನಡ ಗ್ರಂಥಸಂಪಾದನೆ' ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಪುಸಂ. ೭೦, ಮೈಸೂರು, ೧೯೬೪. |
| ೪. | ತೀ.ನಂ.ಶ್ರೀಕಂಠಯ್ಯ | : | 'ಹರಿಹರ ಕವಿಯ ನಂಬಿಯಣ್ಣನ ರಗಳೆ' ಕಾವ್ಯಾಲಯ ಪ್ರಕಾಶಕರು, ಜಯನಗರ, ಪು.ಸಂ. ೧೩, ಮೈಸೂರು-೧೯೪೬. |
| ೫. | ತೀ.ನಂ.ಶ್ರೀಕಂಠಯ್ಯ | : | 'ಹರಿಹರ ಕವಿಯ ನಂಬಿಯಣ್ಣನ ರಗಳೆ' ಕಾವ್ಯಾಲಯ ಪ್ರಕಾಶಕರು, ಜಯನಗರ, ಪು.ಸಂ. ೧೩, ಮೈಸೂರು-೧೯೪೬. |
| ೬. | ತೀ.ನಂ.ಶ್ರೀಕಂಠಯ್ಯ | : | 'ರನ್ನನ ಗದಾಯುದ್ಧ ಸಂಗ್ರಹಂ' ಕಾವ್ಯಾಲಯ ಪ್ರಕಾಶಕರು, ಜಯನಗರ, ಪು.ಸಂ. ೬, ಮೈಸೂರು-೧೯೪೯. |
| ೭. | ಡಾ. ಡಿ.ಎಲ್.ಎನ್. | : | 'ಕನ್ನಡ ಗ್ರಂಥ ಸಂಪಾದನೆ' ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಪುಸಂ. ೬, ಪೀಠಿಕಾ ಭಾಗ, ಮೈಸೂರು-೧೯೬೪. |
| ೮. | ಡಾ. ಎಂ. ಚಿದಾನಂದಮೂರ್ತಿ | : | 'ಶ್ರೀಕಂಠತೀರ್ಥ' ಐ.ಬಿ.ಎಚ್.ಪ್ರಕಾಶನ, ಪು.ಸಂ. ೨೧೧, ಬೆಂಗಳೂರು - ೧೯೭೬. |
| ೯. | ಡಾ. ಎಂ. ಚಿದಾನಂದಮೂರ್ತಿ | : | 'ಶ್ರೀಕಂಠತೀರ್ಥ' ಐ.ಬಿ.ಎಚ್.ಪ್ರಕಾಶನ, ಪು.ಸಂ. ೨೧೨, ಬೆಂಗಳೂರು - ೧೯೭೬ |
| ೧೦. | ಡಾ. ಸಿದ್ಧಯ್ಯ ಪುರಾಣಿಕ | : | 'ಮಣಿಹ', ಬಿ.ಎಂ.ಶ್ರೀ.ಪ್ರತಿಷ್ಠಾನ, ಪು.ಸಂ. ೩೫೭, ಬೆಂಗಳೂರು ೧೯೮೨ |

# ಅಧ್ಯಾಯ - ಆರು

## ಸಮಾರೋಪ

ಒಟ್ಟಾರೆ ಈ ಪ್ರಬಂಧದ ಮುಖ್ಯ ವಿಚಾರವೆಂದರೆ ತೀ.ನಂ.ಶ್ರೀಯವರ ಕೊಡುಗೆ ಕನ್ನಡ ಗ್ರಂಥಸಂಪಾದನ ಕ್ಷೇತ್ರಕ್ಕೆ ಎಷ್ಟರಮಟ್ಟಿಗೆ ಪ್ರಬುದ್ಧಮಾನವಾಗಿದೆ ಎಂದು ಹೇಳಬಹುದು. ತೀ.ನಂ.ಶ್ರೀಯವರು ಸಂಪಾದಿಸಿರುವ ಎರಡು ಪ್ರಾಚೀನ ಕೃತಿಗಳಾದ ನಂಬಿಯಣ್ಣನ ರಗಳೆ ಹಾಗೂ ಗದಾಯುದ್ಧ ಸಂಗ್ರಹಂ ಕೃತಿಗಳು ಕನ್ನಡ ಗ್ರಂಥ ಸಂಪಾದನ ಶಾಸ್ತ್ರದಲ್ಲಿ ಅಭೂತಪೂರ್ವ ಕೃತಿಗಳಾಗಿವೆ.

ತೀ.ನಂ.ಶ್ರೀಯವರು ಕೈಹಾಕುವವರೆಗೆ 'ನಂಬಿಯಣ್ಣನ ರಗಳೆ' ಪ್ರಕಟವಾಗಿರಲೇ ಇಲ್ಲ. ಇದರ ಸಂಪಾದನೆಗೆ ತೀ.ನಂ.ಶ್ರೀಯವರು ಒಟ್ಟು ಐದು ಹಸ್ತಪ್ರತಿಗಳನ್ನು ಬಳಸಿಕೊಂಡಿರುವುದು ನಮಗೆ ಕಂಡುಬರುತ್ತದೆ. ಇವುಗಳಲ್ಲಿ ಮುಖ್ಯವಾಗಿ 'ಕ, ಖ, ಗ, ಚ, ಜ' ಈ ಹಸ್ತಪ್ರತಿಗಳು.

ಈ ಮೇಲಿನ ಐದು ಹಸ್ತಪ್ರತಿಗಳನ್ನು ತೀ.ನಂ.ಶ್ರೀಯವರು ದೊರಕಿಸಿಕೊಂಡು ಈ ಐದು ಹಸ್ತಪ್ರತಿಗಳಲ್ಲಿ ಕವಿಯ ಪಾಠಕ್ಕೆ ಹತ್ತಿರವಿರುವ ಪ್ರತಿಯನ್ನು ತೀ.ನಂ.ಶ್ರೀಯವರು ಆಯ್ಕೆಮಾಡಿಕೊಂಡು ಅದರಂತೆ ಆ ಪ್ರತಿಯನ್ನು ಕವಿಯ ಪಾಠಕ್ಕೆ ಹತ್ತಿರವೆಂದು ಉಳಿದ ಹಸ್ತಪ್ರತಿಗಳನ್ನು ಈ ಮೊದಲ ಹಸ್ತಪ್ರತಿಗೆ ತಕ್ಕಂತೆ ಇದನ್ನು ಉಪಯೋಗಿಸಲಾಗಿದೆ.

''ನಂಬಿಯಣ್ಣನ ರಗಳೆಯ ಯಾವುದೇ ಪುಟ ತೆಗೆದರೂ ಅದರ ತುಂಬ ಅಕ್ಷರಗಳ ಜೊತೆ ಸಂಖ್ಯೆಗಳು, ಚಿಹ್ನೆಗಳು ಕಾಣಿಸಿಕೊಂಡಿವೆ. ಪಾಠಾಂತರ ಚಿಹ್ನೆಗಳನ್ನು ಒಂದು ವ್ಯವಸ್ಥಿತ ರೀತಿಯಲ್ಲಿ ಬಳಕೆಗೆ ತಂದದ್ದು'' ಈ ಗ್ರಂಥಸಂಪಾದನ ಶಾಸ್ತ್ರಕ್ಕೆ ತೀ.ನಂ.ಶ್ರೀಯವರ ಒಂದು ಉಪಯುಕ್ತವಾದ ಕೊಡುಗೆಯಾಗಿದೆ.

ನಂಬಿಯಣ್ಣನ ರಗಳೆಯ ಪ್ರಕಟನೆಯ ಕಾಲಕ್ಕೂ ಗದಾಯುದ್ಧದ ಸಂಗ್ರಹದ ಪ್ರಕಟನೆಯ ಕಾಲಕ್ಕೂ ಕೇವಲ ಮೂರು ವರ್ಷಗಳ ಅಂತರವಿದೆ. ಈ ಮೊದಲೇ

ಸೂಚಿಸಿರುವಂತೆ ನಂಬಿಯಣ್ಣನ ರಗಳೆಯ ಸಂಪಾದನಾ ಕಾರ್ಯರಂಭ ಎಂದ ಮೇಲೆ ಗದಾಯುದ್ಧ ಸಂಗ್ರಹದ ಸಂಪಾದನ ಕಾರ್ಯಕ್ಕೆ ಹಿಡಿದ ಕಾಲದ ನಂಬಿಯಣ್ಣನ ರಗಳೆಯ ಸಂಪಾದನ ಕಾರ್ಯ ನುಂಗಿ ಇದು ಸ್ವಾಭಾವಿಕವಾಗಿಯೇ ನುಂಗಿದೆ.

ನಂಬಿಯಣ್ಣನ ರಗಳೆ ಮೊದಲ ಸಾರಿಗೆ ಪ್ರಕಟವಾಗಬೇಕಾದ್ದರಿಂದ ಹಸ್ತಪ್ರತಿಗಳ ಸಂಗ್ರಹದಿಂದಲೇ ಕಾರ್ಯಾರಂಭ ಮಾಡಬೇಕಾಗಿತ್ತು. ಗದಾಯುದ್ಧಕ್ಕೆ ಪರಿಷ್ಕೃತ ಮುದ್ರಣಗಳ ನೆರವೂ ಇದ್ದವು. ಹಿನ್ನೆಲೆಯಲ್ಲಿ ಗ್ರಂಥಸಂಪಾದನಾ ಕಾರ್ಯದ ಪಕ್ವವಾದ ಅನುಭವವೂ ಇದ್ದುದರಿಂದ ಅದರ ಕಾರ್ಯಕ್ಕೆ ಅಷ್ಟೇ ದೀರ್ಘ ಅವಧಿಯ ಕಾಲ ತಲುಪಬೇಕಾಗಿಲ್ಲವೆಂದು ಹೇಳಬಹುದು. ಏಕೆಂದರೆ ಗದಾಯುದ್ಧಕ್ಕೆ ಪರಿಷ್ಕೃತ ಮುದ್ರಣಗಳ ನೆರವು ಇದ್ದಿರುವ ತೀ.ನಂ.ಶ್ರೀಯವರಿಗೆ ಇದರಿಂದ ಬಹಳ ಉಪಯುಕ್ತವಾಯಿತು.

ಅದರಲ್ಲಿ ಮುಖ್ಯವಾಗಿ ಎಂ.ಎ. ರಾಮಾನುಜೈಯ್ಯಂಗಾರರು ಸಂಪಾದಿಸಿದ್ದ 'ಗದಾಯುದ್ಧವು' ತೀ.ನಂ.ಶ್ರೀಯವರಿಗೆ ನೆರವು ನೀಡಿತು. '' ಅದೇ ರೀತಿ 'ರಾಮಾನುಜೈಯ್ಯಂಗಾರರು' ಬಳಸಿಕೊಡಿರುವ ಕೆಲವು ಹಸ್ತಪ್ರತಿಗಳು, ರನ್ನನ ಪದ್ಯಗಳು ಉಲ್ಲೇಖಗೊಂಡಿರುವ ಹಿಂದಿನ ಕಾವ್ಯ ಸಂಕಲನಗಳನ್ನೂ ಹಾಗೂ ಬಿ.ಎಂ.ಶ್ರೀಯವರ 'ಗದಾಯುದ್ಧ ನಾಟಕ'ವನ್ನು ಕೆಲವು ಸಂಸ್ಕೃತ ಆಕರಗಳನ್ನು ತಮ್ಮ ಸಂಪಾದನ ಕಾರ್ಯದ ವ್ಯಾಪ್ತಿಗೆ ಒಳಪಡಿಸಿಕೊಂಡು ಗದಾಯುದ್ಧ ಕೃತಿಯನ್ನು ಉತ್ತಮ ರೀತಿಯಲ್ಲಿ ಸಂಪಾದಿಸಿಕೊಟ್ಟಿರುವುದು" ತೀ.ನಂ.ಶ್ರೀಯವರ ಪ್ರಮುಖ ಅಂಶವಾಗಿದೆ. ಇಂದಿಗೂ 'ಗದಾಯುದ್ಧ ಸಂಗ್ರಹಂ' ನಿತ್ಯನೂತನ ಸ್ಮರಣೀಯವಾಗಿದೆ.

ಅದೇ ರೀತಿ ನಂಬಿಯಣ್ಣನ ರಗಳೆಗೆ ತೀ.ನಂ.ಶ್ರೀಯವರು ಸ್ವಲ್ಪ ಕಷ್ಟಪಡಬೇಕಾಯಿತು. ಏಕಂದೆರ ಪರಿಷ್ಕೃತ ಮುದ್ರಣಗಳ ನೆರವೂ ಇಲ್ಲದ ಕಾರಣ ಇದರ ಸಂಪಾದನೆ ತುಂಬಾ ತಡವಾಯಿತು ಎಂದು ತೀ.ನಂ.ಶ್ರೀಯವರು ಒಂದು ಕಡೆ ಹೇಳಿಕೊಂಡಿದ್ದಾರೆ. ಒಟ್ಟಾರೆ ಈ ಎರಡು ಕೃತಿಗಳು ಕನ್ನಡ ಗ್ರಂಥ ಸಂಪಾದನ ಕ್ಷೇತ್ರದಲ್ಲಿ ಉತ್ತಮ ಪಾತ್ರವಹಿಸುತ್ತದೆ.

ಈ ಕೃತಿಗಳಲ್ಲಿ ತೀ.ನಂ.ಶ್ರೀಯವರ ಪದ್ಯಗಳಿಗೆ ಭಾಷಾಂತರ ಕೊಡುವಲ್ಲಿ ವಹಿಸಿರುವ ಎಚ್ಚರ ಬಹುಶಃ ಅನನ್ಯ. ಅವರು ಪ್ರತಿಯೊಂದು ಕೃತಿಯಲ್ಲಿ ಪರಿಪೂರ್ಣ ನಿರೀಕ್ಷೆಯನ್ನು ಹೊಂದಿದವರಾಗಿದ್ದರು ಎಂದು ಹೇಳಬಹುದಾಗಿದೆ. ಹರಿಹರನ ಅತ್ಯುತ್ಕೃಷ್ಟ ಕೃತಿಗಳಲ್ಲಿ ಒಂದಾದ ಇದನ್ನು ಮೊಟ್ಟಮೊದಲು ಸಂಪಾದಿಸಿ ಪ್ರಕಟಿಸಿದ ಕೀರ್ತಿ ತೀ.ನಂ.ಶ್ರೀಯವರಿಗೆ ಸಲ್ಲುತ್ತದೆ.

ತೀ.ನಂ.ಶ್ರೀಯವರ ಇನ್ನೊಂದು ಗುಣವೆಂದರೆ ನಂಬಿಯಣ್ಣನ ರಗಳೆಗೆ ಅಥವಾ ಗದಾಯುದ್ಧ ಸಂಗ್ರಹಕ್ಕೆ ಸಂಬಂಧಪಟ್ಟಂತೆ ಓಲೆ ಮತ್ತು ಕಾಗದದ ಹಸ್ತಪ್ರತಿಗಳನ್ನು ಉಪಯೋಗಿಸಿಕೊಂಡು ವಿಶೇಷ ಪರಿಶ್ರಮದಿಂದ ಸಂಪಾದಿಸಿದ ಈ ಅಪರೂಪದ ಗ್ರಂಥವನ್ನು ತಮ್ಮ ಗುರುಗಳಿಗೆ ಅರ್ಪಿಸಿಕೊಂಡಿದ್ದಾರೆ. ಇದು ತೀ.ನಂ.ಶ್ರೀಯವರಲ್ಲಿ ಇರುವ ಮಾತು ಪಾಂಡಿತ್ಯಕ್ಕೆ ನಿದರ್ಶನ ಎಂದು ತಿಳಿಯಬಹುದಾಗಿದೆ.

ತೀ.ನಂ.ಶ್ರೀಯವರು ನಂಬಿಯಣ್ಣನ ರಗಳೆಯನ್ನು ಸಂಪಾದಿಸುವಾಗ ಅನುಸರಿಸಿದ ವಿಧಾನಗಳು ಇಲ್ಲಿ ನಮಗೆ ಮುಖ್ಯವಾಗುತ್ತದೆ. ಅವುಗಳಲ್ಲಿ ಮುಖ್ಯವಾಗಿ ಈ ಕೃತಿಗೆ ಸಂಬಂಧಪಟ್ಟ ಹಸ್ತಪ್ರತಿಗಳ ಸಂಗ್ರಹಣ ಪಾಠಾಂತರ ಸಂಕಲನ ಪಾಠಾಂತರ ಚಿಹ್ನೆಗಳು, ಕೊನೆಯದಾಗಿ ಆ ಐದು ಹಸ್ತಪ್ರತಿಗಳಿಗೂ ಕವಿಯ ಮನೋಧರ್ಮಕ್ಕೆ ಅಥವಾ ಕವಿಪಾಠಕ್ಕೆ ಹತ್ತಿರವಾಗಿರುವ ಪ್ರತಿಯನ್ನು ಆಧರಿಸಿ  ಮಿಕ್ಕ ಪ್ರತಿಯನ್ನು ಅದಕ್ಕೆ ಆಧಾರವಾಗಿಟ್ಟುಕೊಂಡು ಅಧ್ಯಯನ ನಡೆಸಿದ್ದಾರೆ.

ಒಟ್ಟಾರೆ ಹೇಳಬೇಕೆಂದರೆ ತೀ.ನಂ.ಶ್ರೀಯವರು ಸಂಪಾದಿಸಿದ 'ನಂಬಿಯಣ್ಣನ ರಗಳೆಯು' ಉತ್ತಮ ಕೃತಿಯಾಗಿದ್ದು, ಹರಿಹರನ ಹಾಗೂ ಅವನ ಕಾವ್ಯ ಛಂದಸ್ಸು ಕುರಿತು ಸಂಪೂರ್ಣವಾಗಿ ತಿಳಿದುಕೊಳ್ಳಲು ಸಾಧ್ಯವಾಗಿದೆ ಎಂದು ಹೇಳಬಹುದಾಗಿದೆ

''ಗದಾಯುದ್ಧ ಸಂಗ್ರಹವೂ ತೀ.ನಂ.ಶ್ರೀಯವರಿಗೆ ಅಷ್ಟೊಂದು ಕಷ್ಟವಾಗಲಿಲ್ಲ. ಕಾರಣವೆಂದರೆ ಈ ಕೃತಿಗೆ ಪರಿಷ್ಕೃತ ಮುದ್ರಣಗಳ ನೆರವೂ ಇರುವುದರಿಂದ ಇದರ ಸಂಪಾದನ ಕಾರ್ಯ ತೀ.ನಂ.ಶ್ರೀಯವರಿಗೆ ಸುಲಭವಾಯಿತು''[2] ಎಂದು

ಹೇಳಬಹುದಾಗಿದೆ. ತೀ.ನಂ.ಶ್ರೀಯವರು ಸಂಪಾದಿಸಿದ ಇನ್ನೊಂದು ವಿದ್ವತ್ಪೂರ್ಣ ಕೃತಿ ಇದಾಗಿದೆ. ೯೨ ಪುಟಗಳಷ್ಟು ಪದ್ಯಭಾಗವಿರುವ ಈ ಸಂಗ್ರಹಕ್ಕೆ ಕೊಟ್ಟಿರುವ ಟಿಪ್ಪಣಿಗಳು ೧೧೬ ಪುಟಗಳಷ್ಟು ಈ ಟಿಪ್ಪಣಿಗಳು ಹಳಗನ್ನಡ ಭಾಷೆ ಮತ್ತು ಕಾವ್ಯಗಳನ್ನು ಅಭ್ಯಾಸ ಮಾಡುವವರಿಗೆ ಒಂದು ಅಪರೂಪದ ವಿಷಯವಾಗಿದೆ.

ಇದರಿಂದಾಗಿ ತಿಳಿಯುವುದೇನೆಂದರೆ ತೀ.ನಂ.ಶ್ರೀಯವರು ಈ ಎರಡು ಕೃತಿಗಳಿಗೆ ಸಂಬಂಧಪಟ್ಟಂತೆ ಗ್ರಂಥಸಂಪಾದನ ಕಾರ್ಯವನ್ನು ಮಾಡಿದ್ದಾರೆ. ಅದರಲ್ಲೂ ತೀ.ನಂ.ಶ್ರೀಯವರು ಬಳಸಿರುವ ಚಿಹ್ನೆಗಳಂತೂ ಬಹಳ ಆಸಕ್ತಿದಾಯಕವಾಗಿವೆ ಎಂದು ಹೇಳಬಹುದು. ಈ ಚಿಹ್ನೆಗಳು ಮೊದಲು ಪಾಶ್ಚ್ಯಾತ್ಯ ವಿದ್ವಾಂಸರು ಬಳಸುತ್ತಿದ್ದರು. ತದನಂತರ ತೀ.ನಂ.ಶ್ರೀಯವರು ತಮ್ಮ ಗ್ರಂಥ ಸಂಪಾದನ ಕಾರ್ಯದಲ್ಲಿ ಇದನ್ನು ಮೊದಲು ಬಳಸಿದರು ಎಂದು ನಮಗೆ ಗೊತ್ತಾಗುತ್ತದೆ. ಒಟ್ಟಿನಲ್ಲಿ ತೀ.ನಂ.ಶ್ರೀಯವರು ಬಳಸಿರುವ ಚಿಹ್ನೆಗಳು ಇಂದಿಗೂ ಸ್ಮರಣೀಯವಾಗಿದೆ ಎಂದು ಹೇಳಬಹುದು.

'ನಂಬಿಯಣ್ಣನ ರಗಳೆ' ಹಾಗೂ 'ಗದಾಯುದ್ಧ ಸಂಗ್ರಹಂ' ಎರಡು ಕೃತಿಗಳು ತೀ.ನಂ.ಶ್ರೀಯವರ ಉತ್ತಮ ಸಂಶೋಧನೆಯ ಫಲವಾಗಿವೆ. ಇದರಿಂದಾಗಿ ತೀ.ನಂ.ಶ್ರೀಯವರು ಉತ್ತಮ ಸಂಶೋಧಕರು, ಉತ್ತಮ ವಿಮರ್ಶಕರು, ಉತ್ತಮ ಭಾಷಣಕಾರರು ಇತ್ಯಾದಿ ಅಂಶಗಳನ್ನು ತೀ.ನಂ.ಶ್ರೀಯವರ ಬಗ್ಗೆ ಹೇಳಬಹುದು. ಈ ರೀತಿಯಾಗಿ ತೀ.ನಂ.ಶ್ರೀಯವರ ಅಧ್ಯಯನವು ಬಹುಮುಖವಾದುದು.

ತೀ.ನಂ.ಶ್ರೀಯವರು ಸಂಪಾದಿಸಿರುವ ಇವೆರಡು ಕೃತಿಗಳು ಬಹಳ ಉತ್ತಮವಾದ ಕೃತಿಗಳಾಗಿವೆ ಎಂದು ಹೇಳಬಹುದು. ಈ ಕೃತಿಗಳ ನಡುವೆ ನಡೆದ ಸಂಶೋಧನಾ ವಿಧಾನವನ್ನು ನಾವು ಕಾಣಬಹುದಾಗಿದೆ.

ತೀ.ನಂ.ಶ್ರೀಯವರ ಬಗ್ಗೆ ಈ ಪ್ರಬಂಧದ ಎರಡನೆಯ ಅಧ್ಯಯನವೂ ತಿಳಿಸುತ್ತದೆ. ಅದೇನೆಂದರೆ ತೀ.ನಂ.ಶ್ರೀಯವರ ವ್ಯಕ್ತಿತ್ವದ ವಿವರಣೆ ತೀ.ನಂ.ಶ್ರೀಯವರ ಸಮಕಾಲೀನ ವಿದ್ವತ್ ಪರಂಪರೆ ಹಾಗೂ ಅವರ ಕರ್ತವ್ಯ ನಿಷ್ಠೆ ಇತ್ಯಾದಿಗಳನ್ನು

ತೀ.ನಂ.ಶ್ರೀಯವರು ಸೂಕ್ಷ್ಮವಾಗಿ ಗಮನಿಸಿದರು. ಇದರ ಜೊತೆಗೆ ತೀ.ನಂ.ಶ್ರೀಯವರ ಕೊಡುಗೆಯನ್ನು ಗುರುತಿಸಬಹುದಾಗಿದೆ.

ತೀ.ನಂ.ಶ್ರೀಯವರ ಜೀವನ ಒಂದು ಆದರ್ಶವಾದುದು. ತೀ.ನಂ.ಶ್ರೀಯವರ ಜೀವನದ ಪ್ರತಿಭೆಯು ಅಮೂಲ್ಯವಾದುದು. ಕನ್ನಡ ಸಾಹಿತ್ಯ ಶಾಸ್ತ್ರಗಳು, ಭಾಷಾ ವಿಜ್ಞಾನಕ್ಕೆ ಅವರು ಅಮೂಲ್ಯವಾದ ಕೊಡುಗೆಗಳನ್ನು ಕೊಟ್ಟಿದ್ದಾರೆ. ತೀ.ನಂ.ಶ್ರೀಯವರು ಸಂಶೋಧನೆಯು ಗಣನೀಯವಾದ ಪ್ರಗತಿಯನ್ನು ಸಲ್ಲಿಸಿರುವುದು ಇಲ್ಲಿ ಬಹಳ ಮುಖ್ಯವಾದ ಕಾರ್ಯವಾಗಿದೆ. ವಿಶಿಷ್ಟ ರೀತಿಯಾದ ವಾಗ್ಮೀಯತೆ ತೀ.ನಂ.ಶ್ರೀ ಯವರಲ್ಲಿತ್ತು ಎಂಬುದಕ್ಕೆ ಸಾಕ್ಷಿ. ತೀ.ನಂ.ಶ್ರೀಯವರು ಸಂಪಾದಿಸಿರುವ ನಂಬಿಯಣ್ಣನ ರಗಳೆ ಹಾಗೂ ಗದಾಯುದ್ಧ ಸಂಗ್ರಹಂ.

ತೀ.ನಂ.ಶ್ರೀಯವರ ಬೋಧನಾ ವಿಧಾನವು ಅತ್ಯಂತ ಸ್ವಾರಸ್ಯಕರವಾದುದು ಎಂದು ತೀ.ನಂ.ಶ್ರೀಯವರ ನೇರ ಶಿಷ್ಯರಾದ ಎಂ.ವಿ.ಸೀ. ಅವರು 'ಕನ್ನಡ ಗ್ರಂಥಸಂಪಾದನೆಗೆ' ತೀ.ನಂ.ಶ್ರೀಯವರ ಕೊಡುಗೆ ಎಂಬ ಲೇಖನದಲ್ಲಿ ತೀ.ನಂ.ಶ್ರೀಯವರ ಬೋಧನಾ ವಿಧಾನವನ್ನು ಎಂ.ವಿ.ಸೀ. ತರಗತಿಯ ಅನುಭವದಿಂದ ಹೇಳಿಕೊಳ್ಳುತ್ತಾರೆ. ಇದಕ್ಕೆ ಸಂಬಂಧಪಟ್ಟಂತೆ ತರಗತಿಯಲ್ಲಿ ಪರಿಷ್ಕೃತವಾಗಿಯೇ ಉಳಿದ ಕೃತಿಗಳಲ್ಲಿ ಕಂಡುಬರುವ ಲೋಪದೋಷಗಳನ್ನು ಪತ್ತೆ ಹಚ್ಚಿದ್ದಾರೆ ಎಂದು ಹೇಳಬಹುದಾಗಿದೆ. ಏಕೆಂದರೆ ತೀ.ನಂ.ಶ್ರೀಯವರು ಉತ್ತಮ ಭಾಷಣಕಾರರು ಎನ್ನುವುದಕ್ಕೆ ಮುಖ್ಯಸಾಕ್ಷಿಯಾಗಿ ಎರಡು ಕೃತಿಗಳು ಇವೆ. ಅದರಲ್ಲಿ 'ಅನಂತನಾಥ ಪುರಾಣ', 'ರಸರತ್ನಾಕರ' ಎಂಬ ಎರಡು ಕೃತಿಗಳು.

ಈ ಎರಡು ಕೃತಿಗಳಲ್ಲಿ ಕಂಡುಬರುವ ಲೋಪದೋಷಗಳನ್ನು ನಿವಾರಿಸಿ ಕಲಿಕೆಗೆ ಅನುಕೂಲ ಮಾಡಿಕೊಟ್ಟಿದ್ದಾರೆ ಎಂದು ಅವರ ಶಿಷ್ಯರಾದ ಎಂ.ವಿ.ಸೀ. ಅವರು ಹೇಳುತ್ತಾರೆ. ಇದರಿಂದಾಗಿ ತೀ.ನಂ.ಶ್ರೀಯವರಿಗೆ ಬೋಧನೆಯ ಆಳ ಎಷ್ಟಿತ್ತು ಎಂಬುದನ್ನು ನಿರ್ಣಯಿಸುತ್ತದೆ.

ಅದೂ ಅಲ್ಲದೆ ತೀ.ನಂ.ಶ್ರೀಯವರು ಕೆಲವು ಲೇಖನಗಳು ಅಥವಾ ಸಂಶೋಧನಾ ಲೇಖನಗಳನ್ನು ಸಂಪಾದನೆ ಮಾಡುವಲ್ಲಿ ತೀ.ನಂ.ಶ್ರೀಯವರು ತೋರಿದ ಪ್ರತಿಭೆ ಅತ್ಯಮೂಲ್ಯವಾದುದು ಎಂದು ಹೇಳಬಹುದು. ಅದರಲ್ಲೂ ತೀ.ನಂ.ಶ್ರೀಯವರು ಜಾನಪದ ಸಾಹಿತ್ಯದ ಮೇಲೆ ಅನುಕಂಪ ಉಂಟಾಗಿ 'ಹೆಣ್ಣುಮಕ್ಕಳ ಪದಗಳು' ಹಾಗೂ ಕೆರೆಗೆ ಹಾರ' ಎಂಬ ಎರಡು ಲೇಖನಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ.

ಈ ಕೃತಿಗಳ ಮೂಲಕ ತೀ.ನಂ.ಶ್ರೀಯವರು ನಮಗೆ ಜನಪದ ಸಾಹಿತ್ಯದ ಸ್ವರೂಪ, ಹಳ್ಳಿಯ ಹಾಡುಗಳ ವೈವಿಧ್ಯ, ಅವುಗಳ ಕಾವ್ಯಗುಣ ಇತ್ಯಾದಿಗಳನ್ನು ಕುರಿತು ಚರ್ಚೆ ಮಾಡುತ್ತಾರೆ. ಆಗ ತಾನೆ ಓದು ಕಲಿತ ಸಾಮಾನ್ಯ ಜನಕ್ಕೆ ಅರ್ಥವಾಗುವಂತೆ ತಿಳಿದ ಮಟ್ಟಿಗೂ ತಿಳಿಯಾದ ಭಾಷೆಯಲ್ಲಿ ಪರಿಚಯ ಮಾಡಿಕೊಟ್ಟಿರುವುದು ತೀ.ನಂ.ಶ್ರೀಯವರ ಗೌರವಕ್ಕೆ ಪಾತ್ರವಾಗಿದೆ ಎಂದು ಹೇಳಬಹುದು. ಇದರ ಜೊತೆಗೆ ಜನಪದ ಸಾಹಿತ್ಯದಲ್ಲಿ ಕಂಡುಬರುವ ಶಿಷ್ಟ ಸಾಹಿತ್ಯದ ಒಳಹುಗಳನ್ನು ಸೂಚಿಸಿದ್ದಾರೆ. ಇನ್ನೊಂದು ಮಾತಿನಲ್ಲಿ ಹೇಳುವುದಾದರೆ ತೀ.ನಂ.ಶ್ರೀಯವರು ಇದರ ಮೂಲಕ ಜಾನಪದ ಸಾಹಿತ್ಯದ ಬಗ್ಗೆ ಕುತೂಹಲ ತಾಳುವಂತೆ ನಮ್ಮನ್ನು ಪ್ರೇರೇಪಿಸಿರುವುದನ್ನು ಕಾಣಬಹುದಾಗಿದೆ.

ಅದೂ ಅಲ್ಲದೆ ಶಾಸನ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ 'ಎನಿತೆನಿತ್ತಂಬುಜ ಪತ್ರನೇತ್ರೆಯಾ' ಎಂಬ ಲೇಖನದ ಬಗ್ಗೆ ತೀ.ನಂ.ಶ್ರೀಯವರು ನಡೆಸಿರುವ ಸಂಶೋಧನೆ ಬಹಳ ಮುಖ್ಯವಾದುದು. ಈ ಶಾಸನದಲ್ಲಿನ ಹುಡುಕಾಟ ಹಾಗೂ ಅದರ ಮಹತ್ವವನ್ನು ಕುರಿತು ತೀ.ನಂ.ಶ್ರೀಯವರು ಬಹುಭಾಷಾ ಪಂಡಿತರು ಹಾಗೂ ಬಹುಮುಖ ವಿದ್ವತ್ ಪ್ರತಿಭೆಯಿಂದ ಕೂಡಿದವರಾಗಿದ್ದರು ಎಂದು ತಿಳಿಯಬಹುದಾಗಿದೆ. ಕನ್ನಡ ಗ್ರಂಥಸಂಪಾದನೆಗೆ ತೀ.ನಂ.ಶ್ರೀಯವರ ಕೊಡುಗೆ ಚಿರಸ್ಮರಣೀಯವಾದುದು ಎಂದು ಹೇಳಬಹುದಾಗಿದೆ.

## ಅಡಿಟಿಪ್ಪಣಿಗಳು


೧. ಡಾ. ಸಿದ್ದಯ್ಯಪುರಾಣಿಕ : ವಂಣಿಹ' ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಪು.ಸಂ. ೩೫೨, ಬೆಂಗಳೂರು ೧೯೮೨.

೨. ಡಾ. ಎಂ. ಚಿದಾನಂದಮೂರ್ತಿ : 'ಶ್ರೀಕಂಠತೀರ್ಥ' ಐ.ಬಿ.ಎಚ್. ಪ್ರಕಾಶನ, ಪು.ಸಂ. ೩೫೭, ಬೆಂಗಳೂರು ೧೯೭೬.

೩. ಪ್ರೊ. ಎಚ್.ಜಿ. ಸಣ್ಣಗುಡ್ಡಯ್ಯ : 'ತೀ.ನಂ.ಶ್ರೀಕಂಠಯ್ಯ' ಅಕ್ಷಯ ಪ್ರಕಾಶನ, ಪು.ಸಂ. ೨೬, ತುಮಕೂರು ೨೦೦೪.

## ಅನುಬಂಧ -1

### ತೀ.ನಂ.ಶ್ರೀಯವರ ಜೀವನ ಪಥ

1906 ನವೆಂಬರ್ 26, ತೀರ್ಥಪುರದಲ್ಲಿ ಜನನ
ತಂದೆ : ತೀರ್ಥಪುರದ ನಂಜುಂಡಯ್ಯ
ತಾಯಿ : ಬಳುವನೇರಲಿನ ಭಾಗೀರಥಮ್ಮ

1915 ತಾಯಿ : ಭಾಗೀರಥಮ್ಮನವರ ನಿಧನ

1918 ಉಪನಯನ

1923 ತುಮಕೂರಿನಲ್ಲಿ ಎಂಟ್ರೆನ್ಸ್ ಪರೀಕ್ಷೆ ತೇರ್ಗಡೆ

1926 ತುರುವೇಕೆರೆಯ ಜಯಲಕ್ಷ್ಮಿಯೊಡನೆ ವಿವಾಹ, ಮೈಸೂರು ಮಹಾರಾಜ ಕಾಲೇಜಿನಲ್ಲಿ ಬಿ.ಎ. ಪರೀಕ್ಷೆ ತೇರ್ಗಡೆ

1928 ಮೈಸೂರು ಸಿವಿಲ್ ಸರ್ವೀಸ್ ಪರೀಕ್ಷೆ ತೇರ್ಗಡೆ. ಶ್ರೀರಂಗಪಟ್ಟಣದಲ್ಲಿ ಎರಡು ತಿಂಗಳು ಕಾಲ ರೆವೆನ್ಯೂ ಪ್ರೊಬೇಶನರ್ ಕೆಲಸ, ಮೈಸೂರು ಇಂಟರ್ ಮೀಡಿಯಟ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ನೇಮಕ

1929 ಮೈಸೂರು ವಿಶ್ವವಿದ್ಯಾಲಯದ ಇಂಗ್ಲೀಷ್ ಎಂ.ಎ. ಪರೀಕ್ಷೆ ತೇರ್ಗಡೆ, ತಂದೆ ನಂಜುಂಡಯ್ಯನವರ ನಿಧನ, ಮಹಾರಾಜ ಕಾಲೇಜಿಗೆ ಕನ್ನಡ ಅಧ್ಯಾಪಕರಾಗಿ ವರ್ಗ

1931 ಕನ್ನಡ ಎಂ.ಎ. ಪರೀಕ್ಷೆ ತೇರ್ಗಡೆ, ಮಗಳು ವಿಶಾಲಾಕ್ಷಿ ಜನನ

1936 ಮಗಳು ನಾಗರತ್ನಳ ಜನನ

1942 ಮಗ ನಾಗಭೂಷಣನ ಜನನ

1943 ಕನ್ನಡ ಅಸಿಸ್ಟೆಂಟ್ ಪ್ರೊಫೆಸರ್ ಆಗಿ ಬೆಂಗಳೂರು ಇಂಟರ್ ಮೀಡಿಯಟ್ ಕಾಲೇಜಿಗೆ ವರ್ಗ ಮಾತೃ ಸಮಾನರಾದ ಸೋದರತ್ತೆ ಲಕ್ಷ್ಮಿದೇವಮ್ಮನವರ ನಿಧನ, ಮಗಳು ವಿಶಾಲಾಕ್ಷಿಯ ನಿಧನ

1948 ಮೈಸೂರು ಸಂವಿಧಾನ ಪರಿಷತ್ತಿನಲ್ಲಿ ಭಾಷಾಂತರಕಾರರಾಗಿ ಕೆಲಸ

1950 ದಾವಣಗೆರೆ ಧ.ರಾ.ಮ. ಇಂಟರ್‌ಮೀಡಿಯಟ್ ಕಾಲೇಜಿನಲ್ಲಿ ಕೆಲವು ತಿಂಗಳು ಸೂಪರಿಂಟೆಂಡೆಂಟ್, ಕೋಲಾರ ಇಂಟರ್‌ಮೀಡಿಯಟ್ ಕಾಲೇಜಿನಲ್ಲಿ ಕೆಲವು ತಿಂಗಳು ಸೂಪರಿಂಟೆಂಡೆಂಟ್

1950 ಭಾರತ ಸಂವಿಧಾನ ಪರಿಷತ್ತಿನ ಭಾಷಾತಜ್ಞರ ಸಮ್ಮೇಳನದ ಪ್ರತಿನಿಧಿ

| | |
|---|---|
| 1952 | ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಥಮ ಕನ್ನಡ ಪ್ರಾಧ್ಯಾಪಕರಾಗಿ ನೇಮಕ |
| 1953 | ಆಚಾರ್ಯ ಕೃತಿ ಭಾರತೀಯ ಕಾವ್ಯಮೀಮಾಂಸೆ ಪ್ರಕಟಣೆ |
| 1954 | ಪೂನಾ ಡೆಕ್ಕನ್ ಕಾಲೇಜು ಛಳಿಗಾಲದ ಭಾಷಾ ವಿಜ್ಞಾನ ಶಾಲೆಯಲ್ಲಿ ಗೌರವ ಪ್ರಾಧ್ಯಾಪಕ |
| 1955-56 | ರಾಕ್‌ಫೆಲ್ಲರ್ ಪ್ರತಿಷ್ಠಾನದ ಗೌರವ ವೇತನದ ಮೇಲೆ ಅಮೇರಿಕ ಸಂಯುಕ್ತ ಸಂಸ್ಥಾನದ ಮಿಚಿಗನ್ ಮತ್ತು ಪೆನ್ಸಿಲ್ವೇನಿಯಾ ವಿಶ್ವವಿದ್ಯಾಲಯಗಳಲ್ಲಿ ಭಾಷಾಶಾಸ್ತ್ರದ ಉನ್ನತ ವ್ಯಾಸಂಗ, ಅಮೇರಿಕ, ಇಂಗ್ಲೆಂಡ್, ಫ್ರಾನ್ಸ್, ಸ್ವಿಟ್ಜರ್ಲೆಂಡ್, ಹಾಲಂಡ್, ಇಟಲಿ ದೇಶಗಳಲ್ಲಿ ಪ್ರವಾಸ |
| 1957 | ಮೈಸೂರು ಮಹಾರಾಜ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ನೇಮಕ, ದೆಹಲಿಯಲ್ಲಿ ನಡೆದ ಅಖಿಲ ಭಾರತ ಪ್ರಾಚ್ಯವಿದ್ವತ್ತು ಸಮೇಳನದ ದ್ರಾವಿಡ ಭಾಷಾ ವಿಜ್ಞಾನ ಶಾಖೆಯ ಅಧ್ಯಕ್ಷ. |
| 1958 | ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನಿಘಂಟು' ಸಂಪಾದಕ ಸಮಿತಿ ಅಧ್ಯಕ್ಷರಾಗಿ ನೇಮಕ |
| 1960 | ಮೈಸೂರು ಮಾನಸಗಂಗೋತ್ರಿಯ ಕನ್ನಡ ಸ್ನಾತಕೋತ್ತರ ವ್ಯಾಸಂಗ ಮತ್ತು ಸಂಶೋಧನ ವಿಭಾಗದ ಪ್ರಾಧ್ಯಾಪಕರಾಗಿ ನೇಮಕ, ಅಖಿಲಭಾರತ ಭಾಷಾ ವಿಜ್ಞಾನಿಗಳ ಸಂಘದ ಅಧ್ಯಕ್ಷ. |
| 1961 | ಗದಗಿನಲ್ಲಿ ನಡೆದ 43ನೇ ಕನ್ನಡ ಸಾಹಿತ್ಯ ಸಮ್ಮೇಳನದ ಭಾಷಾ ಬಾಂಧವ್ಯ ಗೋಷ್ಠಿಯ ಅಧ್ಯಕ್ಷ. |
| 1962 | ಮಾರ್ಚ್ 31ರಂದು ಸೇವೆಯಿಂದ ನಿವೃತ್ತಿ |
| 1966 | ಸೆಪ್ಟೆಂಬರ್ 7ರಂದು ಕಲ್ಕತ್ತೆಯಲ್ಲಿ ನಿಧನ |
| 1975 | 'ಶ್ರೀಕಂಠತೀರ್ಥ' ಗೌರವ ಗ್ರಂಥ ಸಮರ್ಪಣೆ |
| 1990 | 'ಭಾರತೀಯ ಕಾವ್ಯಮೀಮಾಂಸೆ' ಗೆ ಮರಣೋತ್ತರ ಪಂಪ ಪ್ರಶಸ್ತಿ |
| 1998 | ಬೆಂಗಳೂರಿನಲ್ಲಿ ತೀ.ನಂ.ಶ್ರೀಯವರ ಪುತ್ಥಳಿ ಅನಾವರಣ |
| 2002 | ಬೆಂಗಳೂರಿನಲ್ಲಿ ಪ್ರೊ॥ ತೀ.ನಂ.ಶ್ರೀಯವರ ವೃತ್ತ ನಾಮಕರಣ |
| 2005 | ಪ್ರೊ॥ ತೀ.ನಂ.ಶ್ರೀಯವರ ಜನ್ಮ ಶತಮಾನೋತ್ಸವ ವರ್ಷ ಆಚರಣೆ |

## ಅನುಬಂಧ -2

## ತೀ.ನಂ.ಶ್ರೀಯವರ ಕೃತಿಸೂಚಿ

ಅ) ಕವಿತೆಗಳು - 'ಒಲುಮೆ' ಕಾವ್ಯಾಲಯ ಪ್ರಕಾಶನ, ಜಯನಗರ, ಮೈಸೂರು, ೧೯೩೨.

ಆ) ವಿಮರ್ಶೆ - 'ಪಂಪ' ಪ್ರಸಾರಾಂಗ, ಮೈಸೂರು ವಿ.ವಿ. ೧೯೩೯.

- 'ಕಾವ್ಯ ಸಮೀಕ್ಷೆ', ಕಾವ್ಯಾಲಯ, ಜಯನಗರ, ಮೈಸೂರು, ೧೯೪೭.

- 'ಕಾವಾನುಭವ', ಕಾವ್ಯಾಲಯ, ಜಯನಗರ, ಮೈಸೂರು, ೧೯೭೦.

- 'ಸಮಾಲೋಕನ' ಶೃಂಗೇರಿ ಪ್ರಕಾಶನ, ಚಿಕ್ಕನಾಯಕನಹಳ್ಳಿ, ತುಮಕೂರು, ೧೯೫೮

ಕಾವ್ಯಾಮೀಮಾಂಸೆ - 'ಭಾರತೀಯ ಕಾವ್ಯಮೀಮಾಂಸೆ, ಪ್ರಸಾರಾಂಗ, ಮೈಸೂರು ವಿ.ವಿ. ೧೯೫೩.

ಲಲಿತ ಪ್ರಬಂಧಗಳು - 'ನಂಟರು' ಕಾವ್ಯಾಲಯ, ಜಯನಗರ, ಮೈಸೂರು, ೧೯೬೩.

ಅನುವಾದ - 'ಬಿಡಿಮುತ್ತು', ಕಾವ್ಯಾಲಯ, ಜಯನಗರ, ಮೈಸೂರು ೧೯೭೦.

ರೂಪಾಂತರ - ರಾಕ್ಷಸನ ಮುದ್ರಿಕೆ, ಕಾವ್ಯಾಲಯ, ಜಯನಗರ, ಮೈಸೂರು, ೧೯೪೨.

ವ್ಯಾಕರಣ - 'ಕನ್ನಡ ಮಾಧ್ಯಮ ವ್ಯಾಕರಣ', ಗೀತಾಬುಕ್ ಹೌಸ್, ಮೈಸೂರು, ೧೯೭೨.

ಸಂಪಾದನೆ - 'ಹೆಣ್ಣುಮಕ್ಕಳ ಪದಗಳು' ಅಕ್ಷರ ಪ್ರಚಾರ ಸಮಿತಿ, ಮೈಸೂರು, ೧೯೪೧

- 'ನಂಬಿಯಣ್ಣನ ರಗಳೆ', ಕಾವ್ಯಾಲಯ, ಜಯನಗರ, ಮೈಸೂರು, ೧೯೪೬.

- 'ಗದಾಯುದ್ಧ ಸಂಗ್ರಹಂ', ಕಾವ್ಯಾಲಯ, ಜಯನಗರ, ಮೈಸೂರು, ೧೯೪೯

## ಅನುಬಂಧ -3

## ತೀ.ನಂ.ಶ್ರೀಯವರ ಕುರಿತ ಕೃತಿಸೂಚಿ


೧. ಡಾ. ಎಂ. ಚಿದಾನಂದ ಮೂರ್ತಿ - 'ಶ್ರೀಕಂಠತೀರ್ಥ' ಐ.ಬಿ.ಎಚ್.ಪ್ರಕಾಶನ, ಬೆಂಗಳೂರು, ೧೯೭೬.

೨. ಪ್ರೊ॥ ತೀ.ಶ್ರೀ ನಾಗಭೂಷಣ - 'ತೀ.ನಂ.ಶ್ರೀ ಪಥ ಪರಿಸರ' ಇಳಾಮುದ್ರಣ, ಬೆಂಗಳೂರು, ೨೦೦೬.

೩. ಪ್ರೊ॥ ಎಚ್.ಜಿ. ಸಣ್ಣಗುಡ್ಡಯ್ಯ - 'ತೀ.ನಂ.ಶ್ರೀಕಂಠಯ್ಯ', ಅಕ್ಷಯ ಪ್ರಕಾಶನ, ತುಮಕೂರು, ೨೦೦೪.

೪. ಡಾ. ದೇ. ಜವರೇಗೌಡ - 'ಶ್ರೀಕಂಠದರ್ಶನ' ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೦೬.

## ಅನುಬಂಧ -4

## ಗದಾಯುದ್ಧ ಕೃತಿಯ ಮುದ್ರಣ ಸೂಚಿ

೧. ಎಂ.ಎ. ರಾಮಾನುಜೈಯಂಗಾರ್ಯರು - 'ಗದಾಯುದ್ಧ', ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೫೫

೨. ಕೆ.ವಿ. ಕೃಷ್ಣಭಟ್ಟ - 'ಸಾಹಸಭೀಮ ವಿಜಯ', ಪ್ರಸಾರಾಂಗ, ಮೈಸೂರು ವಿ.ವಿ. ೧೯೪೯.

೩. ಪ್ರೊ॥ ಪಿ. ಸುಬ್ರಾಯಭಟ್ - 'ಗದಾಯುದ್ಧ ದರ್ಪಣಂ', ವಿದ್ಯಾನಗರ್, ಕಾಸರಗೋಡು, ೧೯೭೫

೪. ಆರ್.ವಿ. ಕುಲಕರ್ಣಿ - 'ಸಾಹಸಭೀಮ ವಿಜಯ' ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೮೫.

೫. ಬಿ.ಎಸ್. ಸಣ್ಣಯ್ಯ, ಡಾ. ರಾಮೇಗೌಡ - 'ರನ್ನ ವಿರಚಿತ ಸಾಹಸಭೀಮ ವಿಜಯ' ಪ್ರಸಾರಾಂಗ, ಮೈಸೂರು ವಿ.ವಿ. ೧೯೮೫

೬. ಪ್ರೊ॥ ಎಲ್ಲೆಸ್ಕೆ - 'ರನ್ನ ಕವಿಯ ಗದಾಯುದ್ಧ ಧ್ವನಿ ದರ್ಪಣ', ವಿದ್ಯಾನಿಧಿ ಪ್ರಕಾಶನ, ಗದಗ ೨೦೦೩.

೭. ಡಾ. ಬಾಳಣ್ಣ ಸೀಗೇಹಳ್ಳಿ - 'ರನ್ನನ ಸಾಹಸಭೀಮ ವಿಜಯಂ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೨೦೦೪.

## ಅನುಬಂಧ -5

## ನಂಬಿಯಣ್ಣನ ರಗಳೆ ಕೃತಿಯ ಮುದ್ರಣ ಸೂಚಿ

| | | |
|---|---|---|
| ೧. | ಬಿ.ಸಿ. ಜವಳಿ - ಮಲ್ಲಾಬಾದಿ ವೀರಭದ್ರಪ್ಪ | - 'ಹಂಪೆಯ ಹರಿಹರ ದೇವನ ರಗಳೆಗಳು' ಪಂಪಸಾಹಿತ್ಯ ವಲಯ, ಮೈಸೂರು ೧೯೨೮ |
| ೨. | ಫ.ಗು. ಹಳಕಟ್ಟಿ | - 'ಹರಿಹರನ ರಗಳೆಗಳು', ಸಮಾಜ ಪುಸ್ತಕಾಲಯ, ಧಾರವಾಡ ೧೯೬೮ |
| ೩. | ಎಂ.ಎಸ್. ಸುಂಕಪುರ | - 'ಹಂಪೆಯ ಹರಿಹರ ದೇವನ ನೂತನ ಪುರಾತನ ರಗಳೆಗಳು', ಕ.ವಿ.ವಿ. ಧಾರವಾಡ ೧೯೭೬. |
| ೪. | ಎಂ.ಎಂ. ಕಲಬುರ್ಗಿ | - 'ಹರಿಹರನ ರಗಳೆಗಳು', ಹಂಪಿ ಕನ್ನಡ ವಿಶ್ವವಿದ್ಯಾಲಯ, ೧೯೯೯. |
| ೫. | ಆರ್.ಸಿ. ಹಿರೇಮಠ | - 'ಪುರಾತನರ ರಗಳೆಗಳು' ಕ.ವಿ.ವಿ., ಧಾರವಾಡ, ೧೯೭೩. |
| ೬. | ಪ್ರೊ. ಎಚ್. ದೇವಿರಪ್ಪ | - 'ಹರಿಹರನ ರಗಳೆಗಳು' ಗೌರಿಶಂಕರ ಬುಕ್‌ಹೌಸ್, ಪ್ರಸಾರಾಂಗ, ಮೈಸೂರು ವಿ.ವಿ. ೧೯೬೮ |
| ೭. | ಹಿರೇಮಲ್ಲೂರು ಈಶ್ವರನ್ | - 'ಹರಿಹರನ ಕೃತಿಗಳು' ಒಂದು ಸಂಖ್ಯಾನಿರ್ಣಯ, ಪ್ರಸಾರಾಂಗ, ಮೈಸೂರು ವಿ.ವಿ. ೧೦೭೧ |

## ಅನುಬಂಧ -6

## ಆಕರ ಗ್ರಂಥಸೂಚಿ


೧. ಡಾ. ಎಸ್. ವಿದ್ಯಾಶಂಕರ - 'ಸಮಾಹಿತ' ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು ೨೦೦೪

೨. ಎಂ.ಎಂ. ಕಲಬುರ್ಗಿ - 'ಕನ್ನಡ ಗ್ರಂಥ ಸಂಪಾದನ ಶಾಸ್ತ್ರ', ಸಮಾಜ ಪುಸ್ತಕಾಲಯ, ಧಾರವಾಡ ೧೯೭೨

೩. ಡಾ. ಡಿ.ಎಲ್. ನರಸಿಂಹಚಾರ್ - ಪೀಠಿಕೆಗಳು - ಲೇಖನಗಳು' ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಮೈಸೂರು ೧೯೭೧

೪. ಸದಾನಂದ ಪಾಟೀಲ - ಹರಿಹರನ ಕಥಾಕೋಶ', ಬಸವ ಸಮಿತಿ, ಬೆಂಗಳೂರು ೨೦೦೬.

೫. ಕೆ.ವಿ. ನಾರಾಯಣ - 'ಬೇರು, ಕಾಂಡ, ಚಿಗುರು', ವಿವೇಕ ಪ್ರಕಾಶನ, ವಿಚಾರ ವೇದಿಕೆ, ಬೆಂಗಳೂರು ೧೯೯೭.

೬. ಡಾ. ಎಸ್. ಎಂ. ಕತ್ರೆ - 'ಭಾರತೀಯ ಗ್ರಂಥ ಸಂಪಾದನ ಶಾಸ್ತ್ರದ ಪರಿಚಯ', ವಸಂತ ಪ್ರಕಾಶನ, ಬೆಂಗಳೂರು ೨೦೦೩

೭. ಡಾ. ಡಿ.ಎಲ್. ನರಸಿಂಹಚಾರ್ - 'ಹಂಪೆಯ ಹರಿಹರ' ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು ೧೯೩೫

೮. ಸಂಗಮೇಶ ಸವದತ್ತಿ ಮಠ - 'ಕನ್ನಡ ಸಾಹಿತ್ಯ ಸಂಶೋಧನೆಯ ಇತಿಹಾಸ', ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೩

೯. ಡಾ. ಕಾ.ವೆಂ. ಶ್ರೀನಿವಾಸಮೂರ್ತಿ - 'ನೆಲಗಕಣ್ಣು' ಸಿ.ವಿ.ಜಿ.ಪ್ರಕಾಶನ, ಬೆಂಗಳೂರು ೨೦೦೩

೧೦. ಬಿ.ಎಸ್. ಸಣ್ಣಯ್ಯ - 'ಪ್ರಾಚೀನ ಕನ್ನಡ ಗ್ರಂಥ ಸಂಪಾದನೆ', ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೨

೧೧. ಡಾ. ಸಂಗಮೇಶ ಸವದತ್ತಿ ಮಠ - 'ಕನ್ನಡ ಸಂಶೋಧನೆಯ ಕೈಪಿಡಿ', ವಿದ್ಯಾನಿಧಿ ಪ್ರಕಾಶನ, ಗದಗ ೧೯೯೩

೧೨. ಡಾ. ಸಿದ್ಧಯ್ಯ ಪುರಾಣಿಕ - 'ಮಣಿಹ', ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು ೧೯೮೨

೧೩. ಪ್ರೊ. ಎಚ್ಚೆಸ್ಕೆ - 'ಶಿವಮಯ' ಪ್ರೊ. ಕೆ. ಭೈರವಮೂರ್ತಿ ಅಭಿನಂದನ ಗ್ರಂಥ ಸಮಿತಿ, ಮೈಸೂರು ೧೯೧೯

೧೪. ವಿವಿಧ ಲೇಖಕರು - 'ಆಚಾಯ ತೀ. ನಂ.ಶ್ರೀ ಅವರ ಆಯ್ದ ವಿಮರ್ಶೆ ಲೇಖನಗಳು, ಶೃಂಗಾರ ಪ್ರಕಾಶನ, ಚಿಕ್ಕನಾಯಕನಹಳ್ಳಿ, ತುಮಕೂರು ೨೦೦೦

೧೫. ಸು. ರುದ್ರಮೂರ್ತಿಶಾಸ್ತ್ರಿ - 'ಮಹಾಕವಿ ರನ್ನನ ಗದಾಯುದ್ಧ', ಸ್ವಪ್ನ ಬುಕ್ ಹೌಸ್, ಬೆಂಗಳೂರು ೨೦೦೫

೧೬. ಎಚ್. ದೇವೀರಪ್ಪ - 'ಹರಿಹರ ದೇವಕೃತ ವಿರೂಪಾಕ್ಷಾಂಕಿತ ಶಿವಶರಣ ಸಂಪುಟ', ಬೆಂಗಳೂರು ವಿ.ವಿ. ೧೯೭೩.

೧೭. ಶಾಂತಾದೇವಿ ಎಸ್. ಮಾಳವಾಡ - 'ಹರಿಹರನ ಪ್ರಾರ್ಥನೆಗಳು' ಜಯಪ್ರಕಾಶನ, ಧಾರವಾಡ ೧೯೫೭

೧೮. ಹರಿಹರ ವಿಚಾರ ಸಂಕಿರಣ - 'ವಿವಿಧ ಲೇಖಕರು ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೯

೧೯. ಸದಾನಂದ ಕನವಳ್ಳಿ ಮತ್ತು ಚೆನ್ನಪ್ಪ ಕೆರೆಮನಿ - 'ವೀರಶೈವ ಸಾಹಿತ್ಯ ಸಮೀಕ್ಷೆ' ಮಹಾಕವಿ ಪಂಪ ಪ್ರಕಾಶನ, ಲಕ್ಷ್ಮೇಶ್ವರ, ೧೯೭೬

೨೦. ವಿವಿಧ ಲೇಖಕರು - 'ಹರಿಹರದೇವ' ಕರ್ನಾಟಕ ಸಂಘ, ಕೊಲ್ಲಾಪುರ ೧೯೩೭

೨೧. ಡಾ. ಡಿ.ಎಲ್. ನರಸಿಂಹಚಾರ್ - 'ಕನ್ನಡ ಗ್ರಂಥ ಸಂಪಾದನೆ', ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಮೈಸೂರು ೧೯೬೪.